ಸಂಪಾದಕರು:

ಟ. ಕೆ. ಪಾಟೀಲ ಬಿ. ಎ., ಬಿ. ಟಿ.

ಮಿರ್ಜಿ ಅಣ್ಣಾರಾಯರು.

ಕ್ರಯ ೧-೦-೦



ಮುದ್ರಕರು ಮತ್ತು ಪ್ರಕಾಶಕರು :

ಎ. ಪಿ. ಚೌಗುಲೆ.

ವೀರಭಾರತ ಮುದ್ರಣಾಲಯ, ಬೆಳಗಾಂವ.

# ಎರಡು ಮಾತು

ಈಗ ಏಳೆಂಟು ವರ್ಷಗಳಲ್ಲಿ ನಾನು ಬರೆದ ಕಥೆಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಪ್ರಕಟಿಸಿದೆ. ಇವು ಈಗಾಗಲೇ ಜಯಂತಿ, ಸಮಾಜ, ಚಿತ್ರ-ಗುಪ್ತ, ಕರ್ಮವೀರ ಈ ಪತ್ರಿಕೆಗಳಲ್ಲಿ ಬಂದಿವೆ. ಆಯಾ ಪತ್ರಿಕೆಗಳ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ಇಲ್ಲಿಯ ಕತೆಗಳಲ್ಲಿ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ತರುಣರ ಹುಮ್ಮಸ್ಸು ಬಲ್ಲಿದರ ಬಲ, ನಿರುದ್ಯೋಗಿಯ ನಿಲುಮೆ, ಕಾಯಿದೆಯ ಫಲಶ್ರುತಿ, ಒಡೆದ ಸಂಸಾರದ ಗೋಳು, ಹಳ್ಳಿಯ ಬಾಳು, ಬಡತನದ ಅಸಹಾಯತೆ ಈ ಏಳು ಬಣ್ಣಗಳಿಂದ ಆಧುನಿಕ ಭಾರತೀಯರ ಬಾಳಿನ ಚಿತ್ರವನ್ನು ಕೊಡಲು ಯತ್ನಿಸಿದ್ದೇನೆ.

ಇದನ್ನು ಓದುಗರ ಮುಂದಿಡಲು ನೆರವಾದ ಶ್ರೀ. ಎ. ಪಿ. ಚೌಗುಲೆ ಅವರಿಗೆ ನನ್ನ ವಂದನೆಗಳು ಸಲ್ಲಬೇಕು.

ಶಾಂತಿ ಸೇವಾ ಸದನ
ಸೇಡಬಾಳ
೨೫-೮-೧೯೫೦

ಮಿರ್ಜಿ ಅಣ್ಣಾರಾಯ

# ಪರಿವಿಡಿ.

# ಅರ್ಪಣೆ

ಸತ್ಯ ಪ್ರೇಮಿಗಳೂ ಸಾಹಿತ್ಯ ರಸಿಕರೂ

ಆದ

ಶ್ರೀ. ದಿಕ್ಷಿತ ನರಸಿಂಗರಾಯ

ಅವರಿಗೆ

ಪ್ರೇಮ ಸಮರ್ಪಣವಾಗಿ ಅರ್ಪಿಸುವೆ.

# ಪ್ರಕಾಶಕರ ಅರಿಕೆ.

‘ ಜನವರಿ ೨೬ ’ ಎಂಬ ಉಗ್ರದೇಶಾಭಿಮಾನದ ಏಕಾಂಕ ನಾಟಕವನ್ನು ಕನ್ನಡ ಜನತೆಗೆ ಈಗಾಗಲೆ ಕೊಟ್ಟಿರುವೆವು. ಈಗ **ಶ್ರೀ. ಮಿರ್ಜಿ ಅಣ್ಣಾರಾಯರ** ‘ವಿಜಯಶ್ರೀ’ ಎಂಬ ಕಥಾಸಂಗ್ರಹವನ್ನು ಕೊಡಬಯಸುವೆವು. ನಮ್ಮ ‘ ಅಜಿತ ಎಜನ್ಸಿ ’ ಯ ಮುಖಾಂತರ ಕನ್ನಡ ಸಾರಸ್ವತದ ಸೇವೆಯನ್ನು ಸಲ್ಲಿಸುವೆವೆಂಬ ಕರೆಗೆ ಓಗೊಟ್ಟು ಶ್ರೀ. ಮಿರ್ಜಿ ಅಣ್ಣಾರಾಯರು ತಮ್ಮ ಉತ್ತಮ ಕತೆಗಳನ್ನು ಪೋಣಿಸಲು ಕೊಟ್ಟುದಕ್ಕೆ ಅವರಿಗೆ ತುಂಬಾ ಉಪಕೃತರಿರುವೆವು. ಹೀಗೆಯೆ ಹೊಸ ಹೊಸ ಹಿರಿ-ಕಿರಿಯ ಕನ್ನಡ ಸಾಹಿತಿಗಳು ತಮ್ಮ ಮೀಸಲ ಕೃತಿಗಳನ್ನು ಕಳಿಸಿದರೆ ನಾವು ಸಂತೋಷದಿಂದ ಬರಮಾಡಿಕೊಂಡು ಮುದ್ರಿಸುವೆವೆಂದು ಅಭಯವಚನವನ್ನೀಯಬಯಸುವೆವು. ಈ ಬಗ್ಗೆ ಪತ್ರವ್ಯವಹಾರವನ್ನು ಮಾಡಿಯಾಗಲಿ ಸಮಕ್ಷಮ ಕಂಡಾಗಲಿ ಸಾಹಿತಿಗಳು ತಮ್ಮ ಸಹಾಯ - ಸಹಕಾರವನ್ನು ಒದಕಿಸಬೇಕೆಂದು ಕೇಳಿಕೊಳ್ಳುವೆವು. ಉದಯೋನ್ಮುಖ ಸಾಹಿತಿಗಳಾದ **ಶ್ರೀ. ಕೃಷ್ಣಮೂರ್ತಿ ಕಿತ್ತೂರರ** “ ಹಂಬಲ ” ಎಂಬ ಕಥಾಸಂಗ್ರಹವನ್ನು ಬೇಗನೆ ಒದಗಿಸುವೆವು.

ಕನ್ನಡ ಲೇಖಕರು ಈ ಧೋರಣೆಯಿಂದ ನಡೆದರೆ ಉಭಯತರ ಸೇವೆಯು ಫಲಪ್ರದವಾಗುವದು.

**ಬೆಳಗಾವಿ**
೧-೧-೧೯೫೧

ತಮ್ಮ
**ಎ. ಪಿ. ಚೌಗುಲೆ.**
ಅಜಿತ ಎಜನ್ಸಿ, ಬೆಳಗಾವಿ.

# ವೀರಭಾರತ ಗ್ರಂಥಮಾಲೆ

**ವಿಷಯಗಳ ವೈಪುಲ್ಯತೆ !**

**ರಸಿಕರಿಗೆ ರಸದೂಟ !!**

**ಸಾಮಾನ್ಯರಿಗೆ ಸರಸಭಾವ !!!**

## ವರುಷದಲ್ಲಿ ಆರು ಉತ್ತಮ ಗ್ರಂಥಗಳು

ವಾರ್ಷಿಕ ವರ್ಗಣಿ ಕೇವಲ ೨ ರೂ. ೪ ಆಣೆಗಳು

## ಈಗ ಪ್ರಕಟವಾದ ಗ್ರಂಥಗಳು.

**೧. ಜನವರಿ ೨೬** **ಲೇ. ಶ್ರೀ. ಕೃಷ್ಣ ಪಾಟೀಲ.**

ಉಜ್ವಲ ದೇಶಾಭಿಮಾನದ ನಾಟಕ ಬೆಲೆ ೦—೫—೦

**೨. ವಿಜಯಶ್ರೀ** **ಲೇ. ಮಿರ್ಜಿ ಅಣ್ಣಾರಾಯರು.**

ವಾಸ್ತವ ಪ್ರಪಂಚದ ಸತ್ಯ ಸಂಗತಿಗಳ ಸುಂದರವಾದ ಕಥಾಸಂಗ್ರಹ. ಬೆಲೆ ೧—೦—೨

**೩. ಹಂಬಲ** **ಲೇ. ಕೃಷ್ಣಮೂರ್ತಿ ಕಿತ್ತೂರ**

ನಗುವ, ಅಳುವ, ಮರುಗುವ, ಮನಕೊರೆವ ಒಳ್ಳೆಯ ಕಥೆಗಳ ಗುಂಪು. ಬೆಲೆ ೧—೦—೦

## ಇನ್ನು ಮುಂದೆ ಬರುವವು.

**೪. ಕಾಂಗ್ರೇಸಿನ ಇತಿಹಾಸ**

**೫. ಸಾಕ್ಷರತಾ ಸಾಫಲ್ಯ**

**೬. ? ? ? ?**

**ಇಂದೇ ೨ರೂ. ೪ಆಣೆ ಕಳಿಸಿ ಚಂದಾದಾರರಾಗಿರಿ.**

ಪ್ರಕಟವಾದ ಪುಸ್ತಕಗಳನ್ನು ಕೂಡಲೇ ಕಳಿಸುವೆವು. ಪ್ರಕಟವಾಗುವವುಗಳನ್ನು ಕ್ರಮದಿಂದ ಕಳಿಸುವೆವು.

**ಅಲ್ಪ ಬೆಲೆಯಲ್ಲಿ ಬಹಳ ಪುಸ್ತಕಗಳನ್ನು ಒದಗಿಸುವ ನಾವು ಯಾರು?**

೧೨—೨—೫೧
ಟಿಳಕ ಚೌಕ, ಬೆಳಗಾವಿ.

ಪ್ರಕಾಶಕರು
**ಅಜಿತ ಎಜೆನ್ಸಿ, ಬೆಳಗಾವಿ.**

**ರಾಮಚಂದ್ರ ಹಣಮಂತ ಜಾಧವ; ಬೆಳಗಾಂವ ಇವರು ಬರೆದ**

# ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮ

ಸುಧಾರಿಸಿದ ೨ನೇಯ **ಆವೃತ್ತಿ ಬೆಲೆ ೧—೮—೦**

ಪ್ರತಿಯೊಬ್ಬ ಬ್ರಹ್ಮಚಾರಿಯೂ, ಗೃಹಸ್ಥಾಶ್ರಮಿಯೂ ಅವಶ್ಯವಾಗಿ ಓದಲೇಬೇಕಾದ ಪುಸ್ತಕ. **ಏಕೆ ಕೇಳುವಿರಾ?**

೧. ವಿವಾಹಿತ ಸ್ತ್ರೀ ಪುರುಷರು ಬ್ರಹ್ಮಚರ್ಯವನ್ನು ಯಾಕೆ ಮತ್ತು ಹೇಗೆ ಆಚರಿಸಬೇಕು?

೨. ವಿವಾಹದ ಪೂರ್ವದಲ್ಲಿಯೂ ವಿವಾಹದ ನಂತರವೂ ಹೇಗೆ ವರ್ತಿಸಬೇಕು?

೩. ನಿಜವಾದ ಸಂಸಾರ ಸುಖವೆಂದರೇನು? ಅದನ್ನು ಹೇಗೆ ಅನು ಭೋಗಿಸಬೇಕು?

೪. ವಿವಾಹ ಮಾಡಿಕೊಳ್ಳಬಯಸುವವರು ತಕ್ಕ ವಧೂವರರನ್ನು ಹೇಗೆ ಆರಿಸಬೇಕು?

೫. ಕೆಟ್ಟ ಚಟಗಳು ಹೇಗೆ ತಗಲುವವು?

೬. ಸಂತಾನ ಸಂಯಮನವನ್ನು ಯಾರು ಮತ್ತು ಹೇಗೆ ಪಾಲಿಸಬೇಕು?

೭. ಸ್ತ್ರೀ ಪುರುಷರ ಜಾತಿ ಲಕ್ಷಣ.

೮. ಕಾಮಶಾಸ್ತ್ರ.

೯. ಸಂತತಿ ಆಗುವ ಉಪಾಯ.

೧೦. ಉಪಯುಕ್ತ ಮತ್ತು ಸುಲಭವಾದ ಔಷಧಗಳು. ಇವುಗಳ **ಹೊರ್ತಾಗಿ ಅನೇಕ ಜಟಿಲ ಸಮಸ್ಯೆಗಳಿಗೆ ಉತ್ತರಗಳಿವೆ.**

**ಪುಸ್ತಕ ಬೇಕಾದವರು ತೀವ್ರವಾಗಿ ಈಗಲೇ ಈ ಕೆಳಗಿನ ವಿಳಾಸಕ್ಕೆ** ಬರೆದು ತಿಳಿಸಿ ತಮ್ಮ ಹೆಸರನ್ನು ರಜಿಸ್ಟರ ಮಾಡಿಸಿಕೊಳ್ಳಬೇಕು. ಪ್ರತಿಗಳು ಕಡಿಮೆ ಇರುವ ಕಾರಣ ಹಿಂದಿನಿಂದ ದೊರೆಯಲಾರದೆ ಹೋಗಬಹುದು.

ಮರಾಠಿಯಲ್ಲಿ ಇದೇ ಪುಸ್ತಕದ ಹತ್ತು ಆವೃತ್ತಿಗಳಾಗಿ ಒಂದೂ ಪ್ರತಿ ಉಳಿಯದಂತೆ ಮಾರಾಟವಾಗಿವೆ! ಇದರಿಂದ ಈ ಪುಸ್ತಕದ ಉಪ ಯುಕ್ತತೆಯ ಮತ್ತು ಮಹತ್ವದ ಕಲ್ಪನೆಯಾಗಬಹುದಲ್ಲವೇ? ಕನ್ನಡಿಗರೂ ಇದರ ಸಂಪೂರ್ಣ ಲಾಭ ಮಾಡಿಕೊಳ್ಳುವದು ವಿಹಿತವಲ್ಲವೇ!

**ಅಜಿತ ಎಜನ್ಸಿ, ಬೆಳಗಾವಿ.**



ಮಿರ್ಜಿ ಅಣ್ಣಾರಾಯರು.

ಇಪ್ಪತ್ತೆಂಟು ವರ್ಷದ ನವಯುವಕರೊಬ್ಬರ ಪ್ರಥಮ ಕಾದಂಬರಿಗೆ **ದೇವರಾಜ ಬಹದ್ದೂರ್** ಪ್ರಥಮ ಪ್ರಶಸ್ತಿ ದೊರೆತದ್ದು ಅನೇಕರ ಕುತೂಹಲ ಕೆರಳಿಸಿದೆ. ಯಾರಿವರು? ಎಂದು ಎಲ್ಲರೂ **ಕೇಳಲಾರಂಭವಾಗಿದೆ. ಜೊತೆಗೆ ಶಿವರಾಮ ಕಾರಂತರು** ಬೇರೆ "**ನಿಸರ್ಗ**ದಂಥ ಹತ್ತು ಕಾದಂಬರಿ ಕರ್ನಾಟಕಕ್ಕೆ ಬಂದರೆ ಸಾಕು" ಎಂದು ಹೇಳಿ ಬಿಟ್ಟರು! '**ನಿಸರ್ಗ**'ದ ಮತ್ತು ಅದರ ಲೇಖಕರಾದ **ಮಿರ್ಜಿ ಅಣ್ಣಾರಾಯರ** ಪರಿಚಯ ಮಾಡಿ ಕೊಡಲು 'ಛಾಯಾ' ಹೆಮ್ಮೆ ಪಡುತ್ತದೆ; ಮಿರ್ಜಿ ಅಣ್ಣಾರಾಯರು ಕನ್ನಡ ನಾಡಿನ ಸಂಪತ್ತು, ಹೆಮ್ಮೆ, ಹಿರಿಮೆ. ಇವರು ಇಂಗ್ಲಿಷ ಸಾಲೆಗೆ ಹೋಗಿಲ್ಲ. ಆದರೆ ಕನ್ನಡದಲ್ಲಿ ಸಿಗುವ ವಿಷಯಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಹಿರಿದು ಗೂಳಿಸಿ, ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಜ್ಞಾನಾರ್ಜನೆ ಮಾಡಿದ್ದಾರೆ. ಇವರ ಊರು ಸೇಡಬಾಳ.

— ಛಾಯಾ, ಬೆಂಗಳೂರು.

# ವಿಜಯಶ್ರೀ

卐

ಹಿರಿಯೂರು—ಹೊನ್ನೂರುಗಳ ನಡುವೆ ಐದಾರು ಮೈಲು ಅಂತರ. ಒಂದು ಊರಿಂದ ಮತ್ತೊಂದು ಊರಿಗೆ ಹೋಗಬೇಕಾದರೆ ಚೆನ್ನಾಗಿ ನಡೆಯುವವನಿಗೂ ಎರಡು ತಾಸು ಹಿಡಿಯುತ್ತಿತ್ತು. ಯಾಕಂದರೆ ದಾರಿಯು ಎರಡು ಮೂರು ಮೊರಡಿಗಳನ್ನು ಸುತ್ತುವರಿದು ಏರಿ ಇಳಿದು ಹೊಗುವಂತಹದು, ಕಲ್ಲು ಮುಳ್ಳುಗಳಿಂದ ಕೂಡಿದಂತಹುದು. ಇಂಥ ದಾರಿಯಿಂದ ಚಿಕ್ಕಣ್ಣ ಅವಸರದಿಂದ ಹಿರಿಯೂರಿಗೆ ನಡೆದಿದ್ದಾನೆ. ಅವನ ದೃಷ್ಟಿಯು ಮೇಲಿಂದ ಮೇಲೆ ಕೈಗಡಿಯಾರದತ್ತ ಹರಿಯುವುದು. ಈಗಾಗಲೆ ಎಂಟೂ ಕಾಲು ಗಂಟೆ ಯಾಗಿದ್ದಿತು. ಒಂಬತ್ತು ಗಂಟೆಗೆ ಅವನು ಶಾಲೆಯಲ್ಲಿ ಇರಲಿಕ್ಕೆ ಬೇಕು. ಶಾಲೆಯ ಸರಿಯಾದ ಸಮಯಕ್ಕೆ ಹೋಗಬೇಕಾದರೆ ಆದಷ್ಟು ವತ್ತರದಿಂದ ಸಾಗಬೇಕಾಗಿದ್ದಿತು. ಅದರಲ್ಲೂ ಈ ಹೊತ್ತು ಊರಿಂದ ಹೊರಡಲಿಕ್ಕೆ ಸ್ವಲ್ಪ ತಡವಾಗಿದ್ದಿತವನಿಗೆ. ಆದುದರಿಂದ ಚಿಕ್ಕಣ್ಣ ಅತ್ತಿತ್ತ ನೋಡದೆ ಮುನ್ನಡೆಯುತ್ತಿದ್ದ. ಮುಖ್ಯಾಧ್ಯಾಪಕರು ಈ ವಿಲಂಬವಾದುದಕ್ಕೆ ಏನೆನ್ನುವರೋ ಎಂಬ ಯೋಚನೆಯಲ್ಲಿ ಆದಷ್ಟು ಹಾದಿಯನ್ನು ಹಿಂದೆ ಸರಿಸುವುದರಲ್ಲಿ ಆತುರನಾಗಿದ್ದನಲ್ಲದೆ, ಮತ್ತಾವ ಕಡೆಗೂ ಲಕ್ಷ್ಯವಿರಲಿಲ್ಲ.

"ನಮಸ್ಕಾರರೀ ರಾಯರ" ಎಂಬ ನಗೆಗೂಡಿದ ಮಾತೊಂದು ಒಮ್ಮೆಲೆ ಚಿಕ್ಕಣ್ಣನ ಕಿವಿಗೆ ಬಿತ್ತು. ಚಿಕ್ಕಣ್ಣ ಮುಖವೆತ್ತಿ ನೋಡಿದ; ಸಮೀಪದ ಮೊರಡಿಯಲ್ಲಿಯ ಕಾಲುದಾರಿಯೊಂದರಿಂದ ಶಾಂತೇಶ ಬರುತ್ತಿದ್ದಾನೆ. ಅವನ ಜೊತೆಯಲ್ಲಿ ಅಪರಿಚಿತನೊಬ್ಬನಿದ್ದ. ಕೆಲಹೊತ್ತು ಮಾತನಾಡದೆ ಇಬ್ಬರೂ ಮುಂದೆ ಬಂದರು. ಅದೇಕೋ ಈ ಹೊತ್ತು ಶಾಂತೇಶನ ಮುಖ ಬಾಡಿದಂತಿತ್ತು. ನಿದ್ದೆಗೆಟ್ಟವರಂತೆ ಕಣ್ಣುಗಳು

ಕೆಂಪಾಗಿದ್ದುವು. ಜೊತೆಯುವನ ಮುಖದಲ್ಲಿ ಅಂಜಿಕೆಯು ಒಡಮೂಡು ತ್ತಲಿತ್ತು. ಸೂಕ್ಷ್ಮದೃಷ್ಟಿಯುವನಾದ ಚಿಕ್ಕಣ್ಣನಿಗೆ ಇದು ಹೊಳೆಯದೆ ಇರಲಿಲ್ಲ.

"ಏನು ಶಾಂತೇಶ, ಇಷ್ಟು ಸಪುಕಿನಲ್ಲಿ ಯಾವ ಕಡೆಯಿಂದ ಬರುವುದಾಯಿತು? ಸಂಗಾಡ ಹೊಸಬರಾರೋ ಇದ್ದಂತೆ ಕಾಣುತ್ತದೆ?" ಚಿಕ್ಕಣ್ಣ ನಗೆಮೊಗದಿಂದ ಕೇಳಿದ.

"ಮೊನ್ನೆ ಸಂಜೆಗೇನೇ ಬಂದಿದ್ದೇವೆ. ನಿಮ್ಮ ದಾರೀ ಕಾಯ್ದು ಕಾಯ್ದು ಸಾಕಾಗಿ ಹೋಯ್ತು. ನಿಮ್ಮನ್ನು ಕಾಣುವ ಆತುರ ಹೆಚ್ಚಾಗಿ ಈಗ ಬರಬಹುದೇನೊ ಎಂದು ಇದೇ ದಾರಿಗಿರುವ ಬಾವಿಗೆ ಸ್ನಾನ ಕ್ಕೆಂದು ಬಂದಿದ್ದೆವು."......ಎಂದು ಎಳೆದ ಸ್ವರದಲ್ಲಿ ಶಾಂತೇಶ ನುಡಿದ.

"ದೊಡ್ಡವರು! ಇಂಥ ಚಳಿಯಲ್ಲಿ ತಣ್ಣೀರಿನ ಸ್ನಾನ ಮಾಡ ಲಿಕ್ಕೇನು? ಮನೆಯಲ್ಲಿ ಮಾಡಬೇಕಿತ್ತು? ಅಜ್ಜಿಗೆ ಹೇಳಿದ್ದರೆ ನೀರು ಕಾಯಿಸಿ ಕೊಡುತ್ತಿರಲಿಲ್ಲವೆ?"....

"ಅವರು ನೀರು ಕಾಯಿಸಿದ್ದರು, ನಾವು ಏಳುವಷ್ಟರಲ್ಲಿ; ಆದರೆ ನಿಮ್ಮನ್ನು ಕಾಣುವ ಆತುರ ಒಂದಿತ್ತಲ್ಲ;...ಅದಕ್ಕಾಗಿ ಬಂದೆವಾ ಯಿತು...."ಶಾಂತೇಶ ನಡುವೆಯೇ ಹೇಳಿದ.

"ಎರಡು ಮೂರು ತಿಂಗಳಲ್ಲಿ ಒಮ್ಮೆಯಾದರೂ ನೋಡಬಯಸದವ ರಿಗೆ ಈಗ ಇಷ್ಟು ಆತುರ ಹೆಚ್ಚಾಯಿತೆ?"

"ನಮ್ಮ ಕೆಲಸ ಸುಸೂತ್ರ ಸಾಗಿದಾಗ ನಿಮ್ಮ ಕಡೆಗೆ ಯಾಕೆ ಬರ ಬೇಕು ನಾವು?"

"ಅದೇಕೆ ಬರಬಾರದು?" ಸ್ವಲ್ಪ ತಡೆದು..."ಈಗ ಚರಕಾ ಸಂಘವು ಚೆನ್ನಾಗಿ ನಡೆದಿಲ್ಲವೇ? ಮೊನ್ನೆ ಮಹಾತ್ಮರನ್ನು ಹಿಡಿದ ದಿವಸ ತರುಣರು ಒಳ್ಳೇ ಹುರುಪಿನಿಂದ ಕೆಲಸ ಮಾಡಿದರಂತಲ್ಲ!" ಎಂದು ಚಿಕ್ಕಣ್ಣ ಉತ್ಸುಕತೆಯಿಂದ ಕೇಳಿದ.

"ನಿಜ; ಆದರೆ ಅದರ ಸ್ವರೂಪವು ಬೇರೆಯೇ ಆಯಿತು. ನಿಮಗೂ ಕೇಳಿ ಗೊತ್ತಿರಬೇಕಲ್ಲ!"

"ಅಹುದು; ನಿನ್ನೆಯೇ ಮೋಟಾರ್ ಸ್ಟ್ಯಾಂಡಿನ ಮೇಲೆ ಯಾರೋ ಮಾತಾಡುತ್ತಿದ್ದರು....'ಬೆಕ್ಕೇರಿಗೆ ಮಿಲಿಟರಿ ಬಂದಿದೆ. ತರುಣರೆಲ್ಲ ಊರು ಬಿಟ್ಟಿರುವರು ....' ಎಂದು."

ಮುಂಜಾನೆಯ ಹೊಗೆಮಂಜಿನಲ್ಲಿ ಮೊರಡಿಯ ಮೇಲೆ ಎದುರೆದುರಾಗಿ ನಿಂತ ಮೂವರ ಮುಖದಲ್ಲಿಯೂ ಆತುರವು ಹೆಚ್ಚಾಗಿದ್ದಿತು. ಮಂಜಿನ ಮರೆಯಲ್ಲಿ ರವಿಯು ಮೆಲ್ಲಗೆ ಮೇಲಕ್ಕೇರುತ್ತಲಿದ್ದ. ಮೂವರೂ ಕೂಡಿ ಹಿರಿಯೂರ ಕಡೆಗೆ ಸಾವಕಾಶವಾಗಿ ನಡೆಯತೊಡಗಿದರು.

"ಹೀಗೇನು? ಮತ್ತೇನೇನು. ಆಗಿದೆಯಂತೆ....?" ಎಂದು ಚಿಕ್ಕಣ್ಣನ ಮುಖದ ಕಡೆಗೆ ನೋಡುತ್ತ ಶಾಂತೇಶ ಕೇಳಿದ.

"ನನ್ನನ್ನೇ ಕೇಳು! ನಿಮಗೆ ಗೊತ್ತಿಲ್ಲವೇ ನೀವು ಮಾಡಿದ್ದು?" ಚಿಕ್ಕಣ್ಣ ನಗುತ್ತ ನುಡಿದ.

"ಅವರಿಗೇನು ಗೊತ್ತು? ಮೂರು ದಿವಸಗಳಾಯಿತು ಅವರು ಊರುಬಿಟ್ಟು....", ಎಂದು ರಾಮು—ಇನ್ನೊಬ್ಬಾತನ ಹೆಸರು—ನಡುವೆಯೇ ಮಾತು ಸೇರಿಸಿದ.

"ನೀವೆಂದು ಊರು ಬಿಟ್ಟಿರಿ?" ಕೈಯೊಳಗಿನ ಕೊಡೆಯನ್ನು ಬಗಲಲ್ಲಿ ಹಿಡಿಯುತ್ತ, ರಾಮುನ ಕಡೆಗೆ ಹೊರಳಿ ಚಿಕ್ಕಣ್ಣ ಕೇಳಿದ.

"ನಿನ್ನೆ ಸಂಜೆಗೆ...." ಮುಖದಲ್ಲಿ ಭಯವು ಒಡಮೂಡುತ್ತಿರಲು ರಾಮು ಹೇಳಿದ.

"ಅಲ್ಲಿ ಏನು ವಿಶೇಷ?" ಚಿಕ್ಕಣ್ಣ ಕೇಳಿದ.

"ವಿಶೇಷವೆಂದೇನು ಕೇಳುವಿರಿ? ಎಂಥ ಭಯಂಕರ ಪರಿಸ್ಥಿತಿಯದು! ನಿನ್ನೆಯ ಬೆಳಗು ಮುಂಜಾನೆ ಒಮ್ಮೆಲೇ ಹತ್ತೆಂಟು ಮಿಲಿಟರಿ ಮೋಟಾರುಗಳು ಬಂದವು. ಕೂಡಲೆ ಊರೆಲ್ಲ ಗಡಿಬಡಿ ಎದ್ದಿತು. ಕೆಲವು ಜನ ಹಿರಿಯರು: 'ತರುಣರೆಲ್ಲರು ಈಗಿಂದೀಗ ಊರುಬಿಟ್ಟು ಹೊಲಗಳಲ್ಲಿ ಬೆಳೆಯೊಳಗೆ ಅಡಗಿಕೊಳ್ಳಬೇಕು....' ಎಂದರು. ಮತ್ತೆ ಕೆಲವರು: 'ಎಲ್ಲಿ ಹೋದರೇನು, ಅವರು ಬಿಟ್ಟು ಹೋಗುವರೆ?'

ಎಂದೆನ್ನತೊಡಗಿದರು. ಮತ್ತೊಬ್ಬರು 'ಹುಡುಗಾಟ ಮಾಡಿ ಎಲ್ಲರ ಮೇಲೆ ತಂದಿಟ್ಟರು! ಮರೀ ಕೂಗಿ ನರೀಗಿ ಹಾವಳಿ ತಂದಿಟ್ಟಿತಂತ! ಆಗಃ ನಾ ತಿಳಿದಿದ್ದೆ ಅವರ ಬೆನ್ನ ಹತ್ತೂದು ನೆಟ್ಟಗಲ್ಲ. ಅಂತ....ಏ; ಆ ಬಿಳಿ ಟೊಪ್ಪಗೀ ತಗದು ಒಗೆದು ಪಟಕಾನ್ನರ ಸುತ್ತಾಕಿಲ್ಲಾ?" ಎಂದು ತರುಣರಿಗೆ ಹೇಳತೊಡಗಿದರು. ಇದೆಲ್ಲದರ ಪರಿಣಾಮವಾಗಿ ತರುಣರೆಲ್ಲ ಅಪಗಲೆಂದು ಅತ್ತಿತ್ತ ಓಡಾಡಲು ಪ್ರಾರಂಭಿಸಿದರು. ಕೆಲ ಹೊತ್ತಿನಲ್ಲಿ ಯಾರ ತಲೆಯ ಮೇಲೆ ನೋಡಿದರೂ ಗಾಂಧಿ ಟೊಪ್ಪಿಗೆಯ ಬದಲು 'ಬಾದಲಿ' 'ಕೋಖಾ' ಪಟಕೆಗಳೇ ಕಾಣಹತ್ತಿದವು. ಕೆಲವರು ಊರ ನೆರೆಯಲ್ಲಿರುವ ಜೋಳದ ಬೆಳೆಯಲ್ಲಿ ಸೇರಿ, ಅಲ್ಲಿಂದೆತ್ತೋ ಹೋದರು. ಹೊಸಮನಿ ಭೀಮನೂ ಹಾಗೆ ಮಾಡಬೇಕೆಂದು ಕಮತರ ಹಿತ್ತಲಿನಿಂದ ಬೇಲಿ ಹಾರುವುದರಲ್ಲಿದ್ದ. ಅಷ್ಟರಲ್ಲಿ ಒಬ್ಬ ಮಿಲಿಟರಿ ಸಿಪಾಯಿ ಕಾಣಿಸಿದನಂತೆ, ಅವನಿಗೆ. ಅಷ್ಟರಲ್ಲಿಯೆ ಊರಸುತ್ತಲೂ ಮಿಲಿಟರಿ ಸಿಪಾಯಿಗಳು ವ್ಯಾಪಿಸಿದ್ದರಂತೆ, ನನ್ನ ಮೇಲೆ ಗೌಡರ ಕಣ್ಣು ಬಹಳವಾದ್ದರಿಂದ ನಾನು ಮೊನ್ನೆಯಿಂದ ಊರಲ್ಲಿಲ್ಲವೆಂಬ ಸುದ್ದಿಯನ್ನೇ ನಮ್ಮ ಮನೆಯವರು ಊರಲ್ಲೆಲ್ಲ ಹರಡಿದ್ದರು. ಈ ಶಾಂತೇಶನ ಸಂಗಡ ನಾನೂ ಹೋಗಿರಬೇಕೆಂದು ಕೆಲವರು ತರ್ಕಿಸುತ್ತಿದ್ದರು. ಆದರಿಂದ ನಾನು ಮನೆ ಬಿಟ್ಟು ಹೊರಗೆ ಬರುವುದೂ ಉಚಿತವಾಗಿರಲಿಲ್ಲ; ಅಲ್ಲೇ ಹಿತ್ತಲಲ್ಲಿ ಹೊಟ್ಟಿನ ಬಣಿವೆಯಲ್ಲಿ ಸೇರಿ, ಮರೆಗೆ ಕಣಿಕೆಯ ಸಿವುಡುಗಳನ್ನು ಇಟ್ಟುಕೊಂಡೆ. ಅಲ್ಲಿಂದ ನಮ್ಮೂರ ಮುಖ್ಯ ದಾರಿಯು ಕಾಣುತ್ತಿದ್ದಿತು.... ಯಾರು ಊರೊಳಗೆ ಬರಬೇಕಾದರೂ ಈ ದಾರಿಯಿಂದಲೇ ಬರಬೇಕು. ಚಾವಡಿಯಿಂದ ಊರ ಹೊರಗೆ ಹೋಗಬೇಕಾದರೂ ಇದೇ ಮಾರ್ಗದಿಂದ ಹೋಗುವರು. ಎಲ್ಲವು ಕಾಣುವುದೆಂದು ಸ್ವಸ್ಥವಾಗಿ ಕುಳಿತೆ. ಆದರೂ ಎದೆ ಹಾರುತ್ತಿದ್ದಿತು. ಮೂರು ನಾಲ್ಕು ಗುಂಡು ಹಾರಿಸಿದ ಸಪ್ಪಳವು ನನ್ನ ಎದೆಯನ್ನೇ ನಡುಗಿಸಿತು. ಸ್ವಲ್ಪ ಹೊತ್ತು ಎಲ್ಲವೂ ಶಾಂತವಾಗಿದ್ದಿತು. ಆ ಮೇಲೆ 'ಟಪ್—ಟಪ್' ಎಂದು ಬೂಟಿನ ಸಪ್ಪಳ ಕೇಳಬರಹತ್ತಿತು. ನಾನು ಕುಳಿತಲ್ಲಿಂದಲೇ ಆ ಸಿವುಡುಗಳ ಸಂದಿಯೊಳಗಿಂದ ನಮ್ಮೂರ

ಮುಖ್ಯ ಮಾರ್ಗದ ಕಡೆಗೆ ಕಣ್ಣು ಮಿಟುಕಿಸದೆ ನೋಡುತ್ತಿದ್ದೆ. ಗೌಡರು ಯಾರೊಡನೆಯೋ ಮೆಲ್ಲಗೆ ಮಾತಾಡುತ್ತ ಓಡುತ್ತಿದ್ದರು! ತಲೆಯ ರುಮಾಲು ಬಿಚ್ಚಿತ್ತು....ಕೈ ನಡುಗುತ್ತಿದ್ದವು.....ಕೋಟು ಅಸ್ತವ್ಯಸ್ತವಾಗಿತ್ತು.....ಕಚ್ಚೆ ಕಳೆಯುವುದರಲ್ಲಿತ್ತು. 'ಆ ಶಾಂತೇಶನನ್ನು ತಂದುಕೊಡಿ' ಇಲ್ಲವಾದರೆ ಊರನ್ನೇ ಸುಟ್ಟು ಹಾಕುವೆವು ಮನೆ ಮನೆ ಹುಡುಕುವೆವು. ಸಿಕ್ಕವರಿಗೆ ಗುಂಡು ಹಾಕುವೆವು ' ಎನ್ನುವರು. ಎಂದು ಏನೇನೋ ಹೇಳುತ್ತ ನಡೆದಿದ್ದರು ! ಹಿಂದಿನಿಂದಲೇ ನಲುವತ್ತು ಐವತ್ತು ಜನ ಸೋಲ್ಜರರು ಕಮಾಂಡರನ ಆಜ್ಞೆಯ ಮೇರೆಗೆ 'ರೈಟ್‌ಲೇಫ್ಟ್' ಎಂಬ ತಾಳದಗುಂಟ ಹೆಜ್ಜೆಗಳನ್ನಿಡುತ್ತ ಬಂದರು....! ಎಲ್ಲರ ಹೆಗಲುಗಳ ಮೇಲೆಯೂ ಕೋವಿಗಳಿದ್ದುವು. ಸ್ವಲ್ಪಸ್ವಲ್ಪ ನಡೆದು ಅಲ್ಲಲ್ಲಿಗೆ ನಿಂತು ನಿಂತು ರೈಟ್‌ಲೆಫ್ಟ್ ' ಎಂದು ಕಾಲುಗಳನ್ನು ನೆಲಕ್ಕೆ ಬಡಿಯುತ್ತಿದ್ದರು !

" ಅರ್ಧ ಮರ್ಧ ಕಲಿತ ಕೆಲವು ಮಿಲಿಟರಿ ಸಿಪಾಯಿಗಳನ್ನು ತಂದು, ಹಳ್ಳಿಯ ಜನರನ್ನು ಬೆದರಿಸುತ್ತಿರಬೇಕು....." ಎಂದು ಚಿಕ್ಕಣ್ಣ ತನ್ನ ತರ್ಕವನ್ನು ತಿಳಿಸಿದ !

" ಅಲ್ಲ, ಮುಂದೆ ಹೇಳುವೆನಾದರೂ ಕೇಳಿರಿ! ಆ ಮಿಲಿಟರಿ ಜನರು ಊರೊಳಗೆ ಬಂದಾಗ, ಯಾವ ಮನೆಯಿಂದಲೂ ಒಂದು ಕೂಸು ಕೂಡ ಹೊರಗೆ ಬರುತ್ತಿರಲಿಲ್ಲ. ಇಷ್ಟು ಭೀಕರವಾಗಿತ್ತು. ಆ ಸಂದರ್ಭ ಆ ಸಮಯದಲ್ಲಿ ಅವರ ಹೆಜ್ಜೆಯ ಸಪ್ಪಳವು ತಮ್ಮ ತಾಯಿಯನ್ನು ತಾವೇ ತುಳಿದೊತ್ತುವ ಪೆಟ್ಟುಗಳ ಸಪ್ಪಳದಂತೆ ಕೇಳಬರುತ್ತಿದ್ದಿತು. ಸಂಜೆಯವರೆಗೆ ಊರಲ್ಲೆಲ್ಲ ತಿರುಗಿದರು. ಮನೆಮನೆ ಹೊಕ್ಕರು, ಹೆಂಗಸರನ್ನು ಹೆದರಿಸಿದರು, ಹುಡುಗರನ್ನು ಹಿಡಿದರು. ತರುಣರನ್ನು ಹೊಡೆದರು. ಕೆಲವು ಮುದುಕರನ್ನಂತೂ ಮುಂಜಾನೆ ಚಾವಡಿಯಲ್ಲಿ ಒಯ್ದು ಕೂಡಿಸಿದವರು ಊಟಕ್ಕೂ ಮನೆಗೆ ಬಿಡಲಿಲ್ಲ. ಗೌಡರಿಗೆ ಶಾಂತೇಶನನ್ನು ತಂದು ಕೊಡಿರಿ, ಮುಖ್ಯ ಚಳವಳಿಖೋರನಾತ; ಇಲ್ಲದಿದ್ದರೆ ನಿಮ್ಮನ್ನು ಸಸ್ಪೆಂಡ್ ಇಡತೇವೆ.... ಎಂದು ಪೋಲಿಸಸಾಹೇಬನು ಗದರಿಸಿದನಂತೆ ಸಂಜೆಯ ತಾಸು ಹೊತ್ತು ಉಳಿಯಿತು. ಊರೆಲ್ಲ ಸ್ತಬ್ಧ

ವಾಯಿತು, ಎಂದು ಹೇಳುತ್ತಿರುವಾಗ ರಾಮನ ಸ್ವರವು ಜಗ್ಗಿದ್ದಿತು. ತುಟಿಗಳು ಅದುರುತ್ತಿದ್ದುವು. ಮುಖದ ಮೇಲೆ ಭೀತಿಯ ಲಕ್ಷಣಗಳು ಕಾಣುತ್ತಿದ್ದುವು. ಕಣ್ಣುಗಳನ್ನು ಹೊರಳಿಸಿ ಸುತ್ತಲೂ ನೋಡತೊಡಗಿದ.

ಚಿಕ್ಕಣ್ಣನ ಮುಖವು ಶಾಂತವಾಗಿದ್ದಿತು. ಅವನು ಯಾವುದೋ ವಿಚಾರದಲ್ಲಿರುವಂತೆ ತೋರುತ್ತಿದ್ದಿತು. ಆದರೂ ಒಂದೊಂದು ಹೆಜ್ಜೆಯನ್ನು ಮುಂದಿಡುವಾಗ ರಾಮನನ್ನು ಆಶ್ಚರ್ಯಬೆರೆತ ದೃಷ್ಟಿಯಿಂದ ನೋಡುತ್ತಿದ್ದ. ರಾಮು ಚಿಕ್ಕಣ್ಣನ ಕಡೆಗೆ ಹೊರಳಿದ. ಅವನಿಗೆ ಮುಂದೆ ಮತ್ತೇನೇನೋ ಹೇಳಬೇಕಾಗಿದೆಯೆಂಬುದು ಆತನ ಮುಖಚರ್ಯೆಯ ಮೇಲಿಂದ ತಿಳಿಯುತ್ತಿದ್ದಿತು ಇಬ್ಬರೂ ಕುತೂಹಲ ದೃಷ್ಟಿಯಿಂದ ಅವನನ್ನು ನೋಡುತ್ತಿದ್ದರು. ಆಗ ಅವನು.

" ಹೊತ್ತು ಮುಳಗಿತು, ಮೆಲ್ಲನೆ ಹೊರಗೆ ಬಂದೆ ಯಾರೋ ಮಾತಾಡುತಿದ್ದುದು ಕೇಳಿಸಿತು. 'ಮಿಲಿಟರಿಯು ಹೊಳೆಯಾಚೆಯ ನರಸೀಪುರವನ್ನು ಸುತ್ತುಗಟ್ಟಿ ಶಾಂತೇಶನನ್ನು ಊರಲ್ಲಿ ಹುಡುಕುತ್ತಿರುವುದು, ಅಲ್ಲಿಯೂ ಸಿಕ್ಕದಿದ್ದರೆ ....ಹಿಂದಕ್ಕೆ ನಮ್ಮಲ್ಲಿ ಮಾಸ್ತರನಿದ್ದನಲ್ಲ..... ಚಿಕ್ಕಣ್ಣ ! ಅವನಿಗೂ ಶಾಂತೇಶನಿಗೂ ಬಹಳ ಗೆಳೆತನ, ಅಲ್ಲಿಗೆ ಹೋಗಿರಬೇಕೆಂದು ಎಲ್ಲರ ತರ್ಕವಂತೆ!' ಎಂದು ಕೇಳಿದ ಕೂಡಲೆ ಇತ್ತ ಹೊರಟೆ. ಊರಲ್ಲಿ ಓಣಿಯೋಣಿಗೂ ಸೀಪಾಯಿಗಳು ಮನೆಗಳೊಳಗಿಂದ ತೆಗೆದೊಗೆದ ಸಾಮಾನುಗಳು ಅಸ್ತವ್ಯಸ್ತವಾಗಿ ಬಿದ್ದಿದ್ದುವು. ಅಲ್ಲಲ್ಲಿ ಹೆಂಗುಸರೂ ಮಕ್ಕಳೂ ಗೋಳಿಡುವ ಧ್ವನಿ. ಅಡವಿಯಲ್ಲಿಯೂ ಗುಡಿಸಿಲು ಗುಡಿಸಿಲುಗಳನ್ನು ಹೊಕ್ಕು ಹುಡುಕುತ್ತ, ಸಿಕ್ಕ ಸಿಕ್ಕ ರೈತರನ್ನು ಬಡಿಯುತ್ತ ಹೊಡೆಯುತ್ತ ನಡೆದಿದ್ದರು? ಎಂಥ ಅಸಹ್ಯಕರವಾದ ವರ್ತನೆಗಳವು! ಆ ಭಯಂಕರ ಪರಿಸ್ಥಿತಿಯೊಳಗಿಂದ ಪಾರಾಗಿ ಇಲ್ಲಿಯವರೆಗೆ ಬರಬೇಕಾದರೆ, ಬೆಳತನಕ ಅಲ್ಲಲ್ಲಿ ಅಡಗಿ ಬರಬೇಕಾಯಿತು!" ಎಂದು ಹೇಳಿ ರಾಮು ಮಾತನ್ನು ಮುಗಿಸಿದ. ಎಲ್ಲರೂ ಹೆದರಿಕೆಯಿಂದ ಹೆಜ್ಜೆಗಳನ್ನು ಮೆಲ್ಲಗೆ ಇಡಹತ್ತಿದರು.

ಊರು ಇನ್ನು ಸ್ವಲ್ಪ ದೂರವಿತ್ತು. ಚಿಕ್ಕಣ್ಣನ ಮನದಲ್ಲಿ ಸಿಟ್ಟು ಉದ್ವೇಗ, ಆಶ್ಚರ್ಯಗಳ ತೆರೆಗಳು ಒಮ್ಮೆಲೇ ಎದ್ದು ಮುಳುಗುತ್ತಿ

ಷ್ಟವು ಅದರಲ್ಲೂ ಮುಖದ ಮೇಲೆ ಆಶ್ಚರ್ಯವೇ ಹೆಚ್ಚಾಗಿ ಒಡಮೂಡುತಲಿತ್ತು. ಸುತ್ತಲೂ ಮಂಜಿನ ಮುಬ್ಬು ಮುಸುಕಿತ್ತು. ಅದೇಕೋ ಇಂದಿನ ಮಂಜು ಅಸಹ್ಯವಾಗಿ ತೋರಿತು. ಚಿಕ್ಕಣ್ಣನು ಮುಖದ ಮೇಲಿನ ಮಂಜಿನ ಹನಿಗಳನ್ನು ಒರಸಿಕೊಂಡು ಶಾಂತೇಶನ ಕಡೆಗೆ ತಿರುಗಿ, "ನಿಮ್ಮನ್ನು ಇಷ್ಟೊಂದು ಲಕ್ಷ್ಯದಲ್ಲಿಡಲು ಕಾರಣವೇನು?" ಎಂದು ಕೇಳಿದ.

"ಕಾರಣವನ್ನೇನು ಕೇಳುವಿರಿ? ಒಂಬತ್ತನೆಯ ತಾರೀಖಿನ ದಿವಸ ಮುಂಬಯಿಯಲ್ಲಿ ಮಹಾತ್ಮರನ್ನು ಕಾಂಗ್ರೆಸಿನ ಮುಖಂಡರನ್ನು ಬಂಧಿಸಿದರು.....ಅದು ನಮಗೆ ಮರುದಿನ ತಿಳಿಯಿತು. ಕೂಡಲೆ ನಮ್ಮಲ್ಲಿಯ ಶಾಲೆಯನ್ನು ಮುಚ್ಚಿಸಿ ಹರತಾಳ ಪಾಲಿಸಿದೆವು. ಊರಲ್ಲಿ ಮೆರವಣಿಗೆ ಮಾಡುವುದೆಂದು ಗೊತ್ತು ಮಾಡಿದೆವು. ಭಾಷಣಗಳ ತಯಾರಿಗೆ ತೊಡಗಿದೆವು. ಸಂಕನಕೊಪ್ಪಕ್ಕೆ ಸಂತೆಗೆ ಹೋಗಿಬಂದವರು ಯಾರೋ ಹೇಳಿದರು. 'ಅಲ್ಲಿಯೂ ಸಭೆಯಾಯಿತು, ಮೆರೆವಣಿಗೆ ಹೊರಟಿತ್ತು, ಪೋಲಿಸರು ಅಡ್ಡಿ ಮಾಡಲು ಬಂದರು. ಜನತೆ ಕೇಳಲಿಲ್ಲ, ಹಾಗೆ ಹೊಡೆದಾಡಿದರು, ಮುಂದೆ ಸಾಗಿದರು....' ಎಂದು ಕೇಳಿ ನಮ್ಮಲ್ಲಿಯ ತರುಣರೂ ಹುರುಪುಗೊಂಡರು; ಮಹಾತ್ಮರನ್ನು ಬಿಡುವವರೆಗೆ ಹರತಾಳವನ್ನು ಪಾಲಿಸುವುದೆಂದು ಹುರುಪಿನಲ್ಲಿ ನಿಶ್ಚಯಿಸಿದರು. ಸಂಜೆಗೆ ಊರಲ್ಲಿ ಮತ್ತೆ ಮೆರೆವಣಿಗೆ ತೆಗೆಯಲಾಯಿತು. ಡಂಗುರ ಸಾರಿತು ಸಭೆಯಿದೆಯೆಂದು. ರಾತ್ರಿಯಾಯಿತು. ಬಹಳಷ್ಟು ಜನ ಬಯಲಿನಲ್ಲಿ ಕೂಡಿದ್ದಿತು. ಗೌಡರು "ಸಭೆ ಮಾಡಗೊಡುವುದಿಲ್ಲ!" ಎಂದರು. ತರುಣರು ಅವರ ಮಾತಿಗೆ ಕಿವಿಗೊಡಲಿಲ್ಲ. ಸಭೆ ಮಾಡಿದರು ಸಭೆಗೆ ಅಧ್ಯಕ್ಷರಾರೂ ಸಿಕ್ಕಲಿಲ್ಲ. ಮಾಹಾತ್ಮರ ಭಾವಚಿತ್ರವನ್ನೇ ಅಧ್ಯಕ್ಷರೆಂದು ಕುರ್ಚಿಯಮೇಲಿಟ್ಟೆವು. ಮೊದಲೇ ಸಿದ್ಧಮಾಡಿ ಇಟ್ಟುಕೊಂಡಂತೆ....ಎಲ್ಲರೂ ಹುರುಪಿನಿಂದ ಮಾತಾಡಿದರು. ಮರುದಿನ ಮುಂಜಾನೆ ಶಾಲೆಯಲ್ಲಿ ಹುಡುಗರು ಮಾಸ್ತರರಿಗೆ 'ಅರಸನ ಫೋಟೋ ತೆಗೆದಿಡಿರಿ; ಇಲ್ಲವಾದರೆ ಒಡೆಯುವೆವು ಎಂದರು. ಮಧ್ಯಾಹ್ನದೊಳಗಾಗಿ ಒಡೆದೇ ಬಿಟ್ಟರು! ಮೊದಲೇ ಗ್ರಾಮಸ್ಥರು ತಿಳಿಸಿದಂತೆ

ಅದೇ ದಿವಸ ಸಂಜೆಯ ನಾಲ್ಕು ಘಂಟೆಗೆಂದರೆ ಪೋಲೀಸ ಸಬ್ ಇನಸ್ಪೆಕ್ಟ ರನೂ ಪೋಲೀಸರೂ ಬಂದುಬಿಟ್ಟರು. ನಾವು ಹಾಗೆಯೇ ಕರಿನಿಶಾನಿಯ ಮೆರವಣಿಗೆ ತೆಗೆದೆವು. ಚರಕಾ ಸಂಘದಿಂದ ಮೊದಲು ಮೆರವಣಿಗೆ ಹೊರ ಟಿತು. ಚಾವಡಿಯ ಮುಂದೆ ಬರಲು ಪೋಲೀಸರು ಅಡ್ಡಿ ಮಾಡಲು ಬಂದರು. ಕೆರಳಿದ ಜನರು ಚಾವಡಿಗೆನೇ ಕಲ್ಲೆಸೆದು ಕೂಗಿದರು. 'ಗಾಂಧಿ ಮಹಾರಾ ಜಕೀ ಜೈ! ಭಾರತ ಮಾತಾಕಿ ಜೈ!!' ಎಂದು ಜಯಘೋಷ ಮಾಡಿದರು. ಇನಸ್ಪೆಕ್ಟರನೂ ಗಾಬರಿಗೊಂಡಿರಬೇಕು. ಜನತೆ ಚಾವಡಿಯಲ್ಲಿ ಸೇರಿತ್ತು. ಫೌಜದಾರನನ್ನು ಹೊರಗೆಳೆದು ತಂದಿತು. ಎಲ್ಲರೂ ಕೂಡಿ ಅವನಿಗೂ ಖಾದಿ ಟೊಪ್ಪಿಗೆಯನ್ನೂ ಹಾಕಿದರು, ಕೈಯಲ್ಲಿ ಕರಿಯ ನಿಶಾನೆಯನ್ನು ಕೊಟ್ಟರು, ಸರಕಾರಕ್ಕೆ ಬೈಯಲು ಹೇಳಿದರು. 'ವಂದೇಮಾತರಂ, ಹಾಡು ಹೇಳಲಿಕ್ಕೆ ಹಚ್ಚಿದರು, ಪೋಲೀಸರು ಸುಮ್ಮನೆ ಬೆನ್ನು ಹತ್ತಿದರು. ಫೌಜ ದಾರನಿಂದ --ಸತ್ಯಾಗ್ರಹಿಗಳಿಗೆ ವಿರೋಧ ಮಾಡಲಿಕ್ಕಿಲ್ಲ ಎಂದು ಪ್ರತಿಜ್ಞೆ ಮಾಡಿಸಿದೆವು. ಫೌಜದಾರನೂ ಮೆತ್ತಗಾಗಿದ್ದ. ಹೇಳಿದಂತೆ ಕೇಳಿದ; ಹೋದ ನಾವು ದಿನಾಲು ಕಾರ್ಯಕ್ರಮವನ್ನು ಹಾಗೆಯೇ ಇಟ್ಟೆವು. ಗುಪ್ತ ಸುದ್ದಿ ಯೊಂದು ಬಂತು. 'ಒಮ್ಮೆಲೇ ಮಿಲಿಟರಿಯು ಬಂದು ಎಲ್ಲ ಕಾರ್ಯಕರ್ತ ರನ್ನೂ ಹಿಡಿದೊಯ್ಯುವುದು ಎಂದು. ಕೂಡಲೆ ತರುಣರೆಲ್ಲ ಒತ್ತಟ್ಟಿಗೆ ಸೇರಿ ದರು. ನಮಗೆ ಹೇಳಿದರು:-'ನೀನು ಹಿಂದೆ ಇರಲಿಕ್ಕೆಬೇಕು ಎಂದರೆ ಮುಂದ ಕಾರ್ಯ ಸಾಗುವುದು, ಎಂದು. ನನ್ನನ್ನು ಅದೇ ರಾತ್ರಿಯಲ್ಲಿಯೇ ನರಸೀ ಪೂರಕ್ಕೆ ಕಳಿಸಿದರು. ಅಲ್ಲಿಂದ ಇತ್ತ ಬಂದೆ" ಎಂದು ಒಂದೇ ಉಸುರಿನಲ್ಲಿ ಹೇಳಿ ಮುಗಿಸಿದ ಶಾಂತೇಶ.

ಚಿಕ್ಕಣ್ಣ ನಸು ಬೆದರಿದ, ಯೋಚಿಸಹತ್ತಿದ ಹೆಜ್ಜೆಗಳನ್ನು ಸಾವಕಾಶ ವಾಗಿ ಎತ್ತಿಡಹತ್ತಿದ. ಕುಳಿಗಾಳಿಯೊಂದು ಸುಳಿಯಿತು. ಚಿಕ್ಕಣ್ಣನ ಮೈ ಮೇಲೆ ಮುಳ್ಳೆದ್ದುವು. ಊರು ಸಮೀಪಿಸಿದ್ದಿತು. "ಹಿಗೆಲ್ಲ ಆಗಿದೆಯೋ?" ಎಂಬ ಉದ್ಗಾರವು ಅವನ ಬಾಯಿಂದ ಅವನಿಗೆ ಗೊತ್ತಿಲ್ಲದೆಯೆ ಹೊರ ಟಿತು. ಶಾಂತೇಶನ ಕಡೆಗೆ ಹೊರಳಿ ' ಇರಲಿ , ನೀವು ಈ ಬೀದಿಯಿಂದ ಹಾಯ್ದು ನಮ್ಮ ಮನೆಗೆ ನಡೆಯಿರಿ, ನಾನು ಶಾಲೆಗೆ ಹೋಗಿ ಮನೆಗೆ ಬರುವೆ. ಮನೆ ಸಿಕ್ಕಬಹುದಲ್ಲ? " ಎಂದು ಕೈಮಾಡಿ ಮನೆಯ ಹಿತ್ತಲಿನ

ಹಾದಿಯನ್ನು ತೋರಿಸಿದ ‘ ಮನೆ ಸಿಗದೆ ಏನು ? ಎಂದು ಹೇಳಿ ಇಬ್ಬರೂ ಹೋಗಿಬಿಟ್ಟರು.

ಚಿಕ್ಕಣ್ಣ ಶಾಲೆಯ ಕಡೆಗೆ ಹೊರಳಿ ನಡೆದ. ಅವನ ನಡಿಗೆ ಒತ್ತರದ್ದಾಗಿತ್ತು. ಅದಕ್ಕಿಂತಲೂ ಹೆಚ್ಚು ಅವನ ತಲೆಯೊಳಗಿನ ವಿಚಾರಗಳು ಓಡುತ್ತಿದ್ದವು.' ಇವರೇನೋ ಪುಂಡತನವನ್ನೇ ಮಾಡಿದ್ದಾರೆ! ನಿನ್ನೆ ಸಂಜೆಗೆ ಮಿಲಿಟರಿ ನರಸೀಪುರಕ್ಕೆ ಹೋಗಿದೆಯಂತೆ; ಎಂದ ಮೇಲೆ ಅವರೇನು ಇವನನ್ನು ಬಿಟ್ಟು ಹೋಗುವ ಲಕ್ಷಣ ತೋರುವದಿಲ್ಲ. ಒಂದುವೇಳೆ ನರಸೀಪುರದಲ್ಲಿ ರಾತ್ರಿ ಹನ್ನೆರಡರವರೆಗೆ ಹುಡುಕಿ ಹೊರಬಿದ್ದರೆ ಮಿಲಿಟರಿಯು ಇಷ್ಟರಲ್ಲಿಯೇ ಇಲ್ಲಿ ಬರಬೇಕಾಗಿದ್ದಿತು. ಆದರೆ ಇನ್ನೂ ಬಂದಂತಿಲ್ಲ. ಹಾದಿಯಲ್ಲಿ ಹೊಳೆಯೊಂದನ್ನು ದಾಟಬೇಕಾಗುತ್ತದೆ. ಇನ್ನೂ ಬರಬಹುದು.... ” ಎಂಬ ವಿಚಾರಮಾಲಿಕೆಯ ಮುಡಿಯೊಡನೆಯೇ ಚಿಕ್ಕಣ್ಣನ ಹೃದಯ ಹಾರತೊಡಗಿತು. ‘ ನನಗೂ ಹೊಸದಾದ ಊರು.... ಮೊನ್ನೆ ಮೊನ್ನೆಯೇ ಈ ಊರಿಗೆ ಬಂದಿರುವೆ. ಮಿಲಟರಿ ಬಂದರೆ ಶಾಂತೇಶನನ್ನು ಎಲ್ಲಿಡಬೇಕು? ಏನು ಮಾಡಬೇಕು? ಒಂದುವೇಳೆ ಸಿಕ್ಕರೆ ಎಲ್ಲರೂ ಸಿಗಬೇಕಾಗುವುದು! ಎಂದು ಮೊದಲಾದ ವಿಚಾರದ ಗೊಂದಲದಲ್ಲಿ ಬಿದ್ದ ಚಿಕ್ಕಣ್ಣನಿಗೆ ಹೊರಗಿನ ಜಗತ್ತಿನ ಪರಿವೆಯೇ ಇರಲಿಲ್ಲ.

ಯಾರೋ ಕೆಮ್ಮಿದ ಸಪ್ಪಳಾಯಿತು. ಚಿಕ್ಕಣ್ಣ ಮುಖವೆತ್ತಿ ನೋಡಿದ. ಎದುರಿಗೆ ಮಿಲಿಟರಿ ಸೀಪಾಯಿ! ಉದ್ದವಾದ ದೇಹಯಷ್ಟಿ. ಹೆಗಲಮೇಲೊಂದು ಕೋವಿ. ಕಾಲಲ್ಲಿ ಕರಿಯ ಬೂಟು! ಕಂಡೊಡನೆ ಚಿಕ್ಕಣ್ಣನ ಕೈಕಾಲೇ ತಣ್ಣಗಾದುವು. ಎದೆ ನಡುಗಿತು. ಮೈ ಜುಮ್ಮೆಂದಿತು. ಬೆವರಿತು. ‘ ಇದೇನಾಯಿತು? ಮಿಲಿಟರಿಯು ಬಂದುಬಿಟ್ಟದೆ! ಎಲ್ಲರೂ ಸಿಗುವೆವು! ಮುಂದೆ ನನ್ನ ಸ್ಥಿತಿ? ಎಂಬ ವಿಚಾರಗಳು ತಲೆಯಲ್ಲಿ ಸುಳಿದೊಡನೆಯೇ ಇನ್ನೆಲ್ಲಿ ನೆಲಕ್ಕೆ ಬೀಳುವೆನೆನೋ ಎಂದು ಅಂಜಿದ. ಕೈಯಲ್ಲಿಯ ಕೊಡೆಯನ್ನು ಆಧಾರಕ್ಕಾಗಿ ನೆಲಕ್ಕೆ ಊರಿದ. ಶಾಲೆಯವರೆಗೆ ಹೇಗೆ ಹೋದೆನೆಂಬುದು ಚಿಕ್ಕಣ್ಣನಿಗೆ ತಿಳಿಯಲೇ ಇಲ್ಲ. ಶಾಲೆಯ ಹೊತ್ತೂ ಆಗಿತ್ತು. ಹೆಡ್ ಮಾಸ್ತರರೂ ಬಂದಿದ್ದರು. ಶಾಲೆಯ ಸೂಚನೆಯ ಗಂಟೆಗೆ ಎಚ್ಚತ್ತು ಚಿಕ್ಕಣ್ಣ ಶಾಲೆಯ ಕಟ್ಟೆಯನ್ನು ಏರತೊಡಗಿದ, ವಿಚಾರಮುದ್ರೆಯಿಂದ. ಅಷ್ಟರಲ್ಲಿ ಮುಪ್ಪಿನ ಹೆಡ್ ಮಾಸ್ತರರೇ ಅವಸರದಿಂದ ಹೊರಗೆ

ಬಂದು 'ಇತ್ತ ಬರ್ರಿ!' ಎಂದು ಸೂಚನೆಯಿಂದ ಶಾಲೆಯ ಒಂದುಬದಿಗೆ ಕರೆದೊಯ್ದು "ಶಾಂತೇಶ ಬಂದಿದ್ದಾನೆ!" ಎಂದು ಕಳ್ಳದನಿಯಲ್ಲಿ ಹೆದರಿಕೆಯಿಂದ ಹೇಳಿದರು.

"ಯಾವ ಶಾಂತೇಶ?" ಏನೂ ಅರಿಯದವನಂತೆ ಚಿಕ್ಕಣ್ಣ ಕೇಳಿದ.

"ಚಿಕ್ಕೇರಿಯವ! ಏನು ಭಯಂಕರ ಪ್ರಸಂಗವದು! ಮಿಲಿಟರಿ ಬಂದಿದೆ ಚಿಕ್ಕೇರಿಗೆ; ಅವರಿಗೆ ಸಿಗಲಿಲ್ಲ. ಓಡಿಬಂದಿದ್ದಾನೆ; ಎರಡು ದಿನವಾಯಿತು. ಮಿಲಿಟರಿ ಹುಡುಕುತ್ತ ಊರೂರ ತಿರುಗತ್ತಿದೆ. ನಿನ್ನೆ ನರಸೀಪುರಕ್ಕೆ ಹೋಗಿತ್ತಂತೆ.... '

"ಹೀಗೋ?.... ಇಲ್ಲೇಕೆ ಬಂದಿದ್ದಾನೆ! ಎಲ್ಲರಿಗೂ ಕಷ್ಟ ಕೊಡಲಿಕ್ಕೆ....?" ಎಂದು ಸ್ವಲ್ಪ ತ್ರಾಸಿತ ಸ್ವರವನ್ನು ತಂದು ಚಿಕ್ಕಣ್ಣ ನುಡಿದ.

"ನಿಮಗೆ ಗೊತ್ತಿಲ್ಲ?"

"ಇಲ್ಲ, ನಾನು ಮೊನ್ನೆಯೇ ಊರಿಗೆ ಹೋಗಿರಲಿಲ್ಲವೇನು? ಇದೀಗ ಬಂದೆನಲ್ಲ .. ಊರಿಂದ!"

"ಮೊನ್ನೆ ಬೆಳಗಿನಲ್ಲಿಯೇ ಬಂದಿದ್ದಾನೆ.... ಧ್ವನಿ ಕೇಳಬಂತು.... ಯಾರೆಂದು ಅಜ್ಜಿಯನ್ನು ಕೇಳಿದೆ.... ಆಮೇಲೆ ಅವಳನ್ನು ಹೊರಗೆ ಕರೆದು ಹೇಳಿದೆ: ಮಾಸ್ತರರು ನಾಲ್ಕು ದಿನ ಬರುವುದಿಲ್ಲ—ಎಂದು ಹೇಳಿ ಕಳಿಸಿಕೊಡು' ಎಂದರೆ, ಹುಚ್ಚು ಮುದುಕಿ 'ಬಹಳ ದಿನಕ ಬಂದಿದಾನು.... ನಾಲ್ಕು ದಿನಾ ಇದ್ದು ಹೋಗಲಿ, ಮಾಸ್ತರು ಚಿಕ್ಕೇರಿಯಲ್ಲಿದ್ದಾಗ ಆಗಾಗ ಮನಿಗೆ ಬರತಿದ್ದ....ಚಿಕ್ಕಣ್ಣನ · ಗೆಳೆಯನೀತ....' ಎಂದಿತು. ಎಲ್ಲವನ್ನೂ ತಿಳಿಸಿ ಹೇಳುವುದು ನನ್ನಿಂದಾಗಲಿಲ್ಲ. ನಾಳೆ ಪ್ರಸಂಗ ಬಂದರೆ, ಯಾರಾದರೂ ಅವಳನ್ನು ಒಯ್ದು ಕೇಳಿದರೆ ಹೀಗೇ ನನ್ನ ಹೆಸರೂ ಹೇಳೀತೆಂದು ಭಾವಿಸಿ ಸುಮ್ಮನಾದೆ...."

"ಹಾಗೆ ಮಾಡಬಾರದಿತ್ತು. ನೀವು—ನೀವೇ ಏನಾದರೂ ಹೇಳಿಕಳಿಸಿಬಿಡಬೇಕಾಗಿತ್ತು—" ಎಂದು ಚಿಕ್ಕಣ್ಣ ಹೆಡ್ ಮಾಸ್ತರರ ಮಾತಿನ ಹೊಲಬನ್ನರಿತು ನುಡಿದ.

"ಇರಲಿ, ಈಗ ಬೇಗನೆ ಇಲ್ಲಿಂದ ಅವನನ್ನು ಹೊರಗೆ ಹಾಕಿ ಬಿಡಿರಿ.... ಎಲ್ಲರಿಗೂ ಉಪದ್ರವವಾದೀತು....ನೀವು ಹೊಸಬರು! ಇನ್ನೂ ನಿಮಗೆ ಈ ಊರ ಸ್ಥಿತಿ ಗೊತ್ತಿಲ್ಲ; ಈ ಊರ ಜನ ಬೇರೆ; ಒಬ್ಬರ ಬೆನ್ನು ಒಬ್ಬರಿಗೆ

ಕಾಣಿಸದು. ಈಗ ನಿಮ್ಮ ನೌಕರಿ ಪ್ರಾರಂಭವಾಗಿದೆ....ಹೋಗಿರಿ! ಹತ್ತು ಹದಿನೈದು ನಿಮಿಷಗಳಲ್ಲಿ ಎಲ್ಲಿಯಾದರೂ ಕಳಿಸಿಕೊಟ್ಟು ಬನ್ನಿರಿ. ಅವರು ನಮ್ಮ ಊರಲ್ಲಿಯೆ ಇರುವುದು ಬೇಡ...." ಎಂದು ಹೇಳಿ ಶಾಲೆಯಲ್ಲಿ ಹೋಗಿ ಬಿಟ್ಟರು.

ಚಿಕ್ಕಣ್ಣ ತಿರುಗಿ ಶಾಲೆಯ ಮೆಟ್ಟಿಲುಗಳನ್ನು ಇಳಿಯುತ್ತಲಿದ್ದ, ಮನೆಗೆ ಹೋಗಲೆಂದು. ಅಷ್ಟರಲ್ಲಿ ಮೂರು ನಾಲ್ಕು ಜನ ಮಿಲಿಟರಿ ಸೀಪಾಯಿಗಳು ಕುಳಿತ ಬಂಡಿಯೊಂದು ಶಾಲೆಯ ಮುಂದಿನಿಂದಲೇ ಹಾಯ್ದು ಹೋಯಿತು. ಚಿಕ್ಕಣ್ಣ ತುಂಬ ಹೆದರಿದ. ಆದರೆ ಅದನ್ನಾವುದನ್ನೂ ತೋರಗೊಡದೆ, ಗಂಭೀರವಾಗಿ ತಿರುಗಿ ಶಾಲೆಯಲ್ಲಿ ಹೊದ. ತನ್ನ ವರ್ಗದ ಹುಡುಗರನ್ನುದ್ದೇಶಿಸಿ "ನೋಡಿಕೊಳ್ಳಿರಿ; ಈಗ ಮೂರನೆಯ ಪಾಠ ಓದಿಸಿಕೊಳ್ಳುತ್ತೇನೆ...." ಎಂದು ಒದರಿ ಹೇಳಿದ. ಆಗ ಅವನ ಧ್ವನಿಯು ನಡುಗದೆ ಇರಲಿಲ್ಲ. ಅದಕ್ಕೆ ಮತ್ತೊಂದು ಬಂಡಿಯು ಮಿಲಿಟರಿ ಸೀಪಾಯಿಗಳಿಂದ ತುಂಬಿ ಶಾಲೆಯ ಮುಂದಿನಿಂದ ಹೋದುದು ಕಾರಣವಾಗಿರಬೇಕು. ಚಿಕ್ಕಣ್ಣ ಕೂಡಲೆ ಹೊರಬಿದ್ದು ಮನೆಯ ಕಡೆಗೆ ನಡೆದ. ಸ್ವಲ್ಪ ದೂರ ಹೋಗಿ ಹೊರಳಿ ನೋಡಿದ. ದೂರದಲ್ಲಿ ಆ ಮಿಲಿಟರಿ ಸೀಪಾಯಿ ಮುಂಜಾನೆ ಊರಹೊರಗೆ ಕಂಡವನು ತನ್ನ ಜಾಡನ್ನೇ ಹಿಡಿದು ಬರುತ್ತಿರುವಂತೆ ಭಾಸವಾಯಿತವನಿಗೆ. ಊರಹೊರಗೆ ಹೊನ್ನೂರ ಹಾದಿಯಿಂದ ನಾವು ಮೂವರೂ ಕೂಡಿ ಬರುವುದನ್ನು ಈತ ಕಂಡನೇನೋ!—ಎಂಬ ಶಂಕೆಯಿಂದ, ಚಿಕ್ಕಣ್ಣ ಮನೆಗೆ ಹೋಗಲಿಚ್ಛಿಸದೆ ಹೊರಟ.

"ಶಾಂತೇಶ, ಸದ್ಯ ನೀವು ಇಲ್ಲಿಂದ ಹೋರಡುವುದು ಸುರಕ್ಷಿತ...." ಎಂದು ಮನೆಯ ಮೆಟ್ಟುಗಲ್ಲನ್ನೇರುತ್ತ ಚಿಕ್ಕಣ್ಣ ಹೇಳಿದ. ಮತ್ತು ಸ್ವಲ್ಪ ಅತ್ತಿತ್ತ ನಿರೀಕ್ಷಿಸಿ, ಮನೆಯ ಒಳಗೆ ಹೋಗಿ "ಊರಲ್ಲಿ ಏನೋ ಮಿಲಿಟರಿ ಜನರ ಓಡಾಟ ಕಾಣುತ್ತದೆ....ಅದಷ್ಟು ಬೇಗ ಇಲ್ಲಿಂದ ಸಂಸ್ಥಾನ ಸೀಮೆಯ ಚಿಕ್ಕೂರಿಗೆ ನಡೆಯಿರಿ. ಇಲ್ಲಿಂದ ಅದು ಒಂದೇ ಮೈಲಿನಮೇಲಿದೆ. ಶಾಲೆ ಬಿಟ್ಟ ಕೂಡಲೆ ಅಲ್ಲೇ ಬಂದು ನಿಮ್ಮನ್ನು ಕಾಣುವೆ....ಮಧ್ಯಾಹ್ನದಲ್ಲಿ ನಮ್ಮ ಶಾಲೆಗೂ ಬಿಡುವು. ಮುಂದಿನದನ್ನು ಆ ಮೇಲೆ ನಿರ್ಧರಿಸೋಣ!"

ಶಾಂತೇಶನ ಮುಖವು ಬಾಡಿತು. ಅವನ ಮೇಲೆ ಇಂತಹ ಪ್ರಸಂಗ ಬಂದುದು ಇದೇ ಮೊದಲನೆಯ ಸಾರೆ. ಸಿರಿವಂತರ ಮಗ. ಸುಖದಲ್ಲಿ

ತಿಂದುಂಡು ಬೆಳೆದವ. ಮನದೊಳಗೆ ' ಎಲ್ಲಿ ಹೋದಲ್ಲಿ ಮಿಲಿಟರಿ ಹೀಗೆ ಬೆನ್ನಟ್ಟಿದರೆ ಅಡಗಿ ತಿರುಗುವುದು ಎಷ್ಟುದಿನ....? ಮನೆಯ ಜನರಾದರೂ ಅನುಕೂಲರಿದ್ದಾರೆಯೆ? ಅದೂ ಇಲ್ಲ. ಒಮ್ಮೆಲೇ ಸತ್ಯಾಗ್ರಹವೆಂದು ಏನೋ ಕಾರ್ಯಪ್ರವೃತ್ತರಾದೆವು.... ಸಂಪೂರ್ಣ ವಿಚಾರ ಮಾಡಲಿಲ್ಲ.... ಮುಂದಿನ ಕಾರ್ಯಕ್ರಮವೇನು? ಅತ್ತ ಯುದ್ಧದಲ್ಲಿ ಮಿತ್ರಪಕ್ಷದ ಸ್ಥಿತಿ ಹೇಗಿದೆಯೋ? ಅವರ ಸ್ಥಿತಿಗತಿಗಳ ಮೇಲೆಯೇ ನಮ್ಮ ಜನತೆಯ ಏಳಿಗೆ ತಗಳು ಅವಲಂಬಿಸಿದಂತೆ ಇವೆ.' ಎಂದು ಮೊದಲಾದ ವಿಚಾರಗಳ ಗೊಂದಲದಲ್ಲಿ ಬಿದ್ದು:

" ನೀವು ಯಾವಾಗ ಬರುವಿರಿ ?" ಎಂದು ಕೇಳುತ್ತ ಸಾಶಂಕ ದೃಷ್ಟಿಯಿಂದ ಚಿಕ್ಕಣ್ಣನ ಕಡೆಗೆ ನೋಡಿದ ಶಾಂತೇಶ.

" ಶಾಲೆ ಬಿಟ್ಟ ಕೂಡಲೆ ಬರುವೆ. ಅಲ್ಲಿಯವರೆಗೆ ಇಲ್ಲಿಯ ಒಂದಿಬ್ಬರು ಗೆಳೆಯರನ್ನು ಕೇಳಿಕೊಳ್ಳುವೆ, ಊರಲ್ಲಿಯ ನಿಜವಾದ ಪರಿಸ್ಥಿತಿ ಹೇಗೆಂಬುದನ್ನು. ಸದ್ಯಕ್ಕೆ ನೀವು ಹೊರಡಿರಿ! " ಎಂದು ಇಬ್ಬರನ್ನು ಕಳುಹಿಸಿ ಚಿಕ್ಕಣ್ಣ ಶಾಲೆಯ ಕಡೆಗೆ ನಡೆದ. ಮುಖದಲ್ಲಿ ಉದ್ವೇಗ-ಭಯಗಳು ಒಡೆದು ತೋರುತ್ತಿದ್ದುವು. ಚಿಕ್ಕಣ್ಣ ವಿಚಾರಗಳನ್ನು ಬೇರೆ ಕಡೆಗೆ ಹೊರಳಿಸಲು ಯತ್ನಿಸಿ, ಮುಖದ ಮೇಲೆ ಸ್ವಾಭಾವಿಕ ಚರ್ಯೆಯನ್ನು ತರುವ ಪ್ರಯತ್ನದಲ್ಲಿದ್ದು, ಚಾವಡಿಯ ಮುಂದಿನಿಂದ ಹಾಯ್ದು ನಡೆದಿದ್ದ. ಚಾವಡಿಯಲ್ಲಿ ಮಿಲಿಟರಿಯವರು ಯಾರೂ ಇರಲಿಲ್ಲ. ಪಂತರೊಬ್ಬರೇ ಕುಳಿತಿದ್ದರು.

"ಇಲ್ಲಿತನ ಬಂದು ಹೋಗರೀ ಮಾಸ್ತರ " ಎಂದು ಪಂತರು ಗಂಭೀರವಾಗಿಯೇ ಚಿಕ್ಕಣ್ಣನನ್ನು ಕರೆದರು.

ಚಿಕ್ಕಣ್ಣ ಸ್ವಲ್ಪ ಸಚಿಂತ ಮುದ್ರೆಯಿಂದ ಚಾವಡಿಯ ಕಡೆಗೆ ಹೋಗುತ್ತ " ಶಾಲೆಗೆ ಹೋಗಲು ವೇಳೆ ಆಗ್ತದೆ. ಹೋಗತೇನಿ!" ಎಂದ.

ಪಂತರು "ನಿಮ್ಮ ಕಡೆಗೇ ಸ್ವಲ್ಪ ಕೆಲಸ ಅದ ಬರ್ರಿ!" ಎಂದು ಹಾಸುಗಂಬಳಿಯ ಮೇಲೆ ತೀರ ಸಮೀಪದಲ್ಲಿ ಕೂಡಲು ಹೇಳಿದರು. ಚಿಕ್ಕಣ್ಣ ಕುಳಿತ ಮೇಲೆ ಪಂತರು ಮೆಲ್ಲಗಿನ ದನಿಯಲ್ಲಿ "ಮನೆಯೊಳಗೆ ಏನಾದರೂ ಕಾಂಗ್ರೆಸಿಗೆ ಸಂಬಂಧಿಸಿದ ಪುಸ್ತಕ....ಕಾಗದ ಇದ್ದರ ಎಲ್ಲಾದರೂ ಬೇರೆ

ಕಡೆಗೆ ತೆಗೆದಿಡಿರಿ....ಇಂದು ನಾಳೆ ಇಷ್ಟರೊಳಗ ಮಿಲಿಟರಿ ಬರೋದದ ಅಂತ...."ಎಂದರು.

ಚಿಕ್ಕಣ್ಣನ ಮನಸ್ಸು ಮತ್ತೂ ಅಳುಕಿತು. ಕುಳಿತಲ್ಲಿಯೆ ಕೈಕಾಲು ಗಳು ತಣ್ಣಗಾದುವು. ಅಲ್ಲಿಂದ ಎದ್ದು ಹೋಗುವ ಶಕ್ತಿಯೂ ಇಲ್ಲದಂತಾ ಯಿತವನಿಗೆ. ಮನಸ್ಸು ಇವರು ನನಗೇ ಕರೆದು ಹೇಳಲು ಕಾರಣವೇನು ? ನನ್ನ ಮನೆಯನ್ನೇ ತಪಾಸಿಸಲು ಮಿಲಿಟರಿ ಬರುವುದಿದೆಯೋ? ಬಂದಿ ಹಯೋ ಏನೋ ! ನನ್ನ ಹೆಸರು—ನನಗೂ ಶಾಂತೇಶನಿಗೂ ಗೆಳೆತನವಿ ದ್ದುದು, ಅವರಿಗೆ ಗೊತ್ತಾಗಿದ್ದರೆ....ನಮ್ಮ ಮನೆಯಲ್ಲಿಯೂ....ಮುಳ್ಳವು ದುಕಿ....ಇಂತಹದೇನೂ ಅವಳಿಗೆ ಗೊತ್ತಿಲ್ಲ.....ಯಾರಾದರೂ ಸ್ವಲ್ಪ ಬೆದ ರಿಸಿ ಕೇಳಿದರೆ....ಶಾಂತೇಶ ಬಂದಿದ್ದ, ಎರಡು ದಿನ ಇದ್ದ, ಎಂದು ಹೇಳಿ ಬಿಡತಕ್ಕವಳು! ಆ ಮೇಲೆ ನನ್ನಗತಿಯೇನು?' ಎಂದು ವಿಚಾರಿಸುತ್ತಲೇ.... "ಈ ಹೊತ್ತೇ ನಸುಕಿನಲ್ಲಿ ಯಾರೋ ಬಂದಂತೆ ಕಾಣುತ್ತದಲ್ಲ!" ಎಂದು ಕೇಳಿ ತನ್ನ ಸಂಶಯುವನ್ನು—ತಾನು ಕಂಡದನ್ನು ಪ್ರಮಾಣಿಸಿ ನೋಡಲು ಚಿಕ್ಕಣ್ಣ ಯತ್ನಿಸಿದ ದನಿ. ನಡುಗಗೊಡಬಾರದೆಂದರೂ ಕೊಂಚ ನಡುಗದೆ ಇರಲಿಲ್ಲ.

"ಇದ್ದರೂ ಇರಬಹುದು! ಗೌಡರು ನಮಗೆ ಏನೂ ತಿಳಿಸುವುದಿಲ್ಲ!" ಎಂದರು ಪಂತರು. ಪಂತರ ಮಾತಿನಿಂದ ಚಿಕ್ಕಣ್ಣನ ಮನಸ್ಸು ಮತ್ತೂ ಅಲ್ಲೋಲಕಲ್ಲೋಲವಾಯಿತು. ಮೈಯೆಲ್ಲ ಬೆವರೊಡೆಯಿತು. ಆದರೂ ಮೆಲ್ಲನೆ ಏಳುತ್ತ "ನಮ್ಮ ಮನೆಯಲ್ಲಿ ಅಂತಹ ಯಾವ ಪುಸ್ತಕಗಳೂ ಇಲ್ಲ ...!"ಎಂದು ಹೇಳಿ ಹೊರಡಲನುವಾದನು.

"ನಾ ಹೇಳಿದೆನೆಂದು ಯಾರ ಮುಂದೆಯೂ ಹೇಳಬೇಡಿ ಮತ್ತೆ !" ಎಂದರು ಪಂತರು. ತಮ್ಮ ಅಂಜಿಕೆಯನ್ನು ಪ್ರದರ್ಶಿಸಿ, ಹೆದರಿದವನ ಕಾಲಲ್ಲಿ ಹಾವನ್ನು ಬಿಟ್ಟರು.

"ಇಲ್ಲ." ಎಂದು ಚಿಕ್ಕಣ್ಣ ಶಾಲೆಯತ್ತ ಸಾಗಿದ. ಕ್ಲಾಸಿನಲ್ಲಿ ವಿಷಯ್ವ ಸಾಗಿಸುವಷ್ಟು ಅವನ ಮನಸ್ಸು ಸ್ಥಿರವಾಗಲಿಲ್ಲ. ಕುಳಿತಲ್ಲಿಯೇ ತಲೆಯಲ್ಲಿ ಏನೇನೋ ವಿಚಾರಗಳು ಬರತೊಡಗಿದುವು. ನನ್ನ ಮದುವೆ ನಿಶ್ಚಿತವಾ ಗಿದೆ....ಇನ್ನೊಂದು ತಿಂಗಳಲ್ಲಿ ಮದುವೆ....ಸುತ್ತಲೂ ಭಾರತ ಸಂರಕ್ಷಣ

ಕಾಯಿದೆಯಂತೆ ಸಂಶಯು ಬಂದ ಜನರನ್ನು ಹಿಡಿಯುತ್ತಲಿದ್ದಾರೆ....! ನನ್ನನ್ನು ಹಿಡಿದರೆ ? ಹಿಡಿದರೂ ಹೋಗಲು ಅಡ್ಡಿಯಿಲ್ಲ ! ಹೋಗಲು ತಕ್ಕಂತೆ ದೇಶಕಾರ್ಯವನ್ನಾದರೂ ನಾನು ಮುಂಚಿತ ಮಾಡಿರಬೇಕಿಲ್ಲ...; ಅತ್ತ ಅಂತಹ ದೇಶಕಾರ್ಯವನ್ನು ಮಾಡಿಲ್ಲ ಇತ್ತ ಮದುವೆಯೂ ಇಲ್ಲ ನಿಷ್ಕಾರಣವಾಗಿ ಸೆರೆಮನೆವಾಸ. ಮನೆಯವರಿಗೆ ಸಂಕಟ! ನಾ ಮೊದಲೇ ಬಡವ! ಮದುವೆ ಇಷ್ಟಕ್ಕೇ ನಿಂತಿತು. ಸೆರೆಮನೆ ಸೇರಿದ ಬಡ ಹುಡುಗನಿಗೆ ಆ ಮೇಲೆ ಇವರು ಹೆಣ್ಣು ಕೊಡುವರೋ ಇಲ್ಲವೊ ? ಹೀಗಾದರೆ ಮುಪ್ಪಿನ ತಂದೆ ತಾಯಂದಿರು ಎಷ್ಟು ನೊಂದು ಕೊಂಡಾರು ? ಈಗ ಮದುವೆಯ ಸಿದ್ಧತೆ ಮಾಡಬೇಕೋ.... ಮಾಡಬಾರದೋ....ಏನು ಸದ್ಯಕ್ಕೆ ನಿಲ್ಲಿಸಿಬಿಡ ಬೇಕೋ....? ಸಾಮಾನು ಸಿದ್ಧಗೊಳಿಸಬೇಡಿರೆಂದು....ಮನೆಯವರಿಗೆ ಹೇಗೆ ಹೇಳುವುದು....ನನ್ನನ್ನು ಬಂಧಿಸುವರೆಂಬುದಾದರೂ ನಿಶ್ಚಿತವೇ ? ಒಂದು ವೇಳೆ ನಿಶ್ಚಿತವಾದರೆ ಹಿರಿಯರು ಎಷ್ಟು ನೊಂದುಕೊಂಡಾರು ? ಒಬ್ಬನೇ ಒಬ್ಬ ಮಗನ ಮದುವೆ ಮಾಡುವೆವೆಂದು ಹುಬ್ಬಿನಲ್ಲಿದ್ದಾರೆ! ಬಡವನ ಮದು ವೆಯ ಸನ್ನಾಹವೆಲ್ಲ ಆದ ಮೇಲೆ ಒಮ್ಮೆಲೇ ಹಿಡಿದುಬಿಟ್ಟರೆ....? ಎಂದು ಮೊದಲಾಗಿ ತನ್ನ ವಿಚಾರದಲ್ಲಿರುವಾಗಲೇ ಶಾಲೆ ಬಿಡುವ ಸೂಚನೆಯ ಗಂಟೆಯಾಯಿತು.

ಅದೊಂದು ಜೋಳದ ಹೊಲದೊಳಗಿನ ಬೇವಿನ ಮರ. ಅದರ ಸುತ್ತಲೂ ಚೆನ್ನಾಗಿ ಜೋಳದ ನಿಲುವು ಇದೆ. ಆ ಗಿಡದ ನೆರಳಿನಲ್ಲಿ ಯಾರು ಕುಳಿತರೂ ಹಾದಿಯಿಂದ ಹೋಗುವವರಿಗೆ ಕಾಣುವಂತಿರಲಿಲ್ಲ. ಅಲ್ಲಿ ಕುಳಿ ತವರಿಗೆ ಮಾತ್ರ....ದಾರಿಯಿಂದ ಯಾರು ಹೋದರೂ ಸ್ವಲ್ಪ ತಿಳಿಯುವಂ ತಿತ್ತು. ಅಂತಹ ಸ್ಥಳದಲ್ಲಿ ಕುಳಿತು ಚಿಕ್ಕಣ್ಣ, ಶಾಂತೇಶ, ರಾಮು, ಮೂವರೂ ಊಟ ಮಾಡಲು ಸಿದ್ಧರಾಗಿದ್ದರು.

"ಮುಂದಿನ ಕಾರ್ಯಕ್ರಮವೇನು ?" ಚಿಕ್ಕಣ್ಣ ರೊಟ್ಟಿಯಗಂಟನ್ನು ಬಿಚ್ಚುತ್ತ ಕೇಳಿದ. "ವಿಜಾಪುರ ಜಿಲ್ಲೆಯಲ್ಲಿ ಒಂದು ಹಳ್ಳಿಯೊಳಗೆ ನಮ್ಮ ಅಪ್ಪರಿದ್ದಾರೆ....ಅಲ್ಲಿ ಹೋಗಿ ಕೆಲವು ದಿನ ನಿಲ್ಲುವುದು ಒಳಿತೆಂದು ನನಗೆ ತೋರುವುದು. ನಾನು ಕರೆದುಕೊಂಡು ಹೋಗಿ ಇವರನ್ನು ಇಟ್ಟು ಬರುವೆ..."ಎಂದು ರಾಮು ಶಾಂತೇಶನ ಮುಖದ ಕಡೆಗೆ ನೋಡುತ್ತ ಹೇಳಿದ.

ಶಾಂತೇಶ ಏನೋ ವಿಚಾರದಲ್ಲಿರುವಂತೆ ತೋರುತ್ತಿದ್ದಿತು. ಮೂವರ ಮೂರು ರೊಟ್ಟಿಗಳನ್ನು ಕೈಯಲ್ಲಿ ಹಿಡಿದು ತಿನ್ನತೊಡಗಿದರು. ಎಲ್ಲರೂ ಊಟ ಮಾಡುತಿದ್ದರಾದರೂ ಯಾರ ಲಕ್ಷವೂ ಸಂಪೂರ್ಣವಾಗಿ ಊಟದ ಕಡೆಗೆ ಇದ್ದಂತಿರಲಿಲ್ಲ. ಅಲ್ಲಿಂದ ಸಮೀಪದಲ್ಲಿಯೆ ಇದ್ದ ಹಾದಿಯಿಂದ ಯಾರಾದರೂ ಹಾಯ್ದು ಹೋದಂತಾದರೂ ಸಾಕು, ಅತ್ತ ಲಕ್ಷಪೂರ್ವಕ ವಾಗಿ ನಿರೀಕ್ಷಿಸುವರು. ಒಮ್ಮೆ ಅಕಸ್ಮಾತ್ತಾಗಿ ಒಂದು ಮೇಲಿನ ಹೆಂಟೆಯು ಬೀಳಲು, ಚಿಕ್ಕಣ್ಣ ಚಟ್ಟನೆ ಎದ್ದು ನಿಂತು ಬೆದರುಗಣ್ಣುಗಳಿಂದ ಸುತ್ತಲೂ ನಿರೀಕ್ಷಿಸತೊಡಗಿದ....ಶಾಂತೇಶ ನಗುತ್ತ ಗಿಡದ ಮೇಲಿನ ಕಾಗೆಯು ಗೂಡಿನಿಂದ ಬಿತ್ತು' ಎಂದು ಹೇಳಲು ಅವನ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಒಮ್ಮೆ ಸ್ವಲ್ಪ ಗಾಳಿಬೀಸಿ ಜೋಳದ ದಂಟುಗಳ ಸಪ್ಪಳ ವಾಗಲು, ಮೂವರೂ ಯಾರೋ ಬಂದರೆಂದೇ ಭಾವಿಸಿದರು. ಹೀಗೆ ಅಸ್ಥಿರ ಮನಸ್ಸಿನಲ್ಲಿಯೆ ಊಟದ ಶಾಸ್ತ್ರವನ್ನೊಮ್ಮೆ ಮುಗಿಸಿದರು.

"ಎಲ್ಲಿಯಾದರೂ ದೂರ ಹೋಗಿ ಸುಮ್ಮನೆ ಕುಳಿತುಕೊಳ್ಳುವುದರಲ್ಲಿ ಅರ್ಥವಿಲ್ಲ. ಮನೆಯಿಂದ ಹೊರಬಿದ್ದ ಮೇಲೆ ಆದರಂತೆ ಏನಾದರೂ ದೇಶ ಕಾರ್ಯ ಮಾಡಲಿಕ್ಕೆ ಬೇಕು. ಜೊತೆಯುವರು 'ನೀವು ಹಿಂದೆ ಇರಬೇಕು.... ಎಂದರೆ ಕೆಲಸ ಮುಂದೆ ಸಾಗುವುದು...." ಎಂದು ಹೇಳಿ, ನನ್ನನ್ನು ಬೇರೆ ಡೆಗೆ ಕಳಿಸಿಕೊಟ್ಟ ಉದ್ದೇಶವಾದರೂ ಏನು....?" ಎಂದು ಶಾಂತೇಶ ಕೈದೊಳೆಯುತ್ತ ಹೇಳಿದ.

"ನೀನೆನ್ನುವುದು ನಿಜವಾದುದೇ. ಆದರೆ ಕಾರ್ಯದ ಸ್ವರೂಪ. ಅದನ್ನು ಮಾಡುವ ರೀತಿ-ನೀತಿಗಳ ಸ್ಪಷ್ಟ ಜ್ಞಾನವಿರಬೇಕು.... ಮೇಲಾಗಿ ದೃಢನಿಶ್ಚಯವೂ ಬೇಕು. ಬೆಂಬಲಕ್ಕೆ ಜನತೆ ಬೇಕು. ಸ್ವತಃ ರಾಜದಂಡ ನೆಗೂ ಸೆರೆಮನೆ ವಾಸಕ್ಕೂ ಸಿದ್ಧನಿರಲಿಕ್ಕೆಬೇಕು.... ಪ್ರಸಂಗ ಬಂದರೆ ದೇಶ ಕ್ಕಾಗಿ ಆತ್ಮವನ್ನು ಬಲಿ ಕೊಡಲೂ ಹಿಂದೆ ಮುಂದೆ ನೋಡಲಾಗದು. ಈಗ ನೀವು ಭಾವಿಸಿರುವಷ್ಟು ಈ ಕಾರ್ಯ ಸುಲಭವಲ್ಲ. ಕೂಡಲೆ ಕೊನೆ ಗೊಳ್ಳುವುದೂ ಅಲ್ಲ. ಸ್ವಾತಂತ್ರ್ಯ ಬಾಗಿಲಲ್ಲಿ ಕಾಯ್ದು ನಿಂತಿಲ್ಲ. ಈಗಲೇ ಸಿಕ್ಕೇ ತೀರುವುದೆಂದು ನಂಬಿ ಕಾರ್ಯ ಮಾಡಿ, ಆ ಮೇಲೆ ನಿರಾಶೆ ಗೊಳ್ಳುವುದರಲ್ಲಿ ಅರ್ಥವಿಲ್ಲ. ಜನತೆಯನ್ನು ಸ್ವಾತಂತ್ರ್ಯದ ದಾರಿಯಲ್ಲಿ

ಒಂದು ಹೆಜ್ಜೆ ಮುಂದಿಡಿಸುವುದಿಷ್ಟೇ.... ಇಂದಿನ ನಿಮ್ಮ ಹೊಣೆ.... ಆ ಎದರಿಂದ ಪೂರ್ಣ ವಿಚಾರ ಮಾಡಿ ಮುನ್ನುಗ್ಗುವುದು ಒಳಿತು" ಎಂದು ಚಿಕ್ಕಣ್ಣ ತನ್ನ ಎಚ್ಚರಿಕೆಯನ್ನು ಸೂಚಿಸಿದ.

"ಜನತೆಯ ನೆರವು ಬೇಕಾದಷ್ಟಿದೆ. ಈ ಒಂದೆರಡು ದಿವಸಗಳಲ್ಲಿ ಊರಲ್ಲಿ ಯಾರು ಯಾರನ್ನು ಹಿಡಿದರೋ ಇನ್ನೂ ಗೊತ್ತಾಗಿಲ್ಲ. ಊರ ಕಡೆಯ ಸಮಾಚಾರ ತಿಳಿದುಕೊಂಡು ಮುಂದಿನ ಹೆಜ್ಜೆಯಿಡಬೇಕಾಗಿದೆ. ಈ ಹೊತ್ತು ಹೋಗಿ ನಮ್ಮ ನೆರೆಯ ಊರಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಮಾಡಬೇಕು. ಮಿಲಿಟರಿಯವರು ಈ ಭಾಗಕ್ಕೆ ಬಂದು ಹುಡುಕುವಷ್ಟರಲ್ಲಿ ಆ ದಿಶೆಗೆ ಕಾರ್ಯ ಮಾಡಿ ಅಧಿಕಾರಿಗಳಿಗೆ ಹುಚ್ಚು ಹಿಡಿಸಬೇಕು." ಎಂದ ಚಿಕ್ಕಣ್ಣ ಹುರುಪಿನಿಂದ.

"ನೀವು ಎಲ್ಲಿ ಹೋಗಿ ಕಾರ್ಯ ಮಾಡಬಯಸಿದರೂ ಆ ಹಳ್ಳಿಯ ಜನರ ಬೆಂಬಲ ನಿಮಗೆ ಬೇಕು.... ಈ ದಿನಗಳಲ್ಲಿ ಒಮ್ಮೆಲೇ ಯಾರನ್ನೂ ನಂಬುವಂತಿಲ್ಲ. ಸುಮ್ಮನೆ ಹೋಗಿ ಸಾರ್ವಜನಿಕ ಸಭೆ ಮಾಡುವೆನೆಂದರೆ ಸಾಧ್ಯವೂ ಇಲ್ಲ, ಉಪಯೋಗವೂ ಇಲ್ಲ. ಒಳಗಿಂದೊಳಗೇ ಜನತೆಯ ಮನಸ್ಸನ್ನು ಸಿದ್ಧಗೊಳಿಸಲುಬೇಕು. ದೇಶದಲ್ಲಿ ಕಾರ್ಯ ಮಾಡುವ ಹಿರಿಯ ಮುಖಂಡರಾದರೂ ಸಿಗುವರೇನೋ ನೋಡಿ, ಅವರ ಹೆಜ್ಜೆ ತುಳಿಯಬೇಕು.... ಇಲ್ಲವಾದರೆ ಸಂಘಟನೆಯಿಂದ ಕೆಲಸವೂ ಆಗಲಿಕ್ಕಿಲ್ಲ.... ಕೂಡಲೆ ಜೇಲನ್ನೂ ಸೇರಬೇಕಾದೀತು...."

"ಬಿಡಿರಿ; ಹೀಗೆ ಎಂದಾದರೂ ಸರಕಾರದವರಿಗೆ ನಾವು ಸಿಕ್ಕಬಹುದೇ? ನಮ್ಮೂರ ನೆರೆಯ ಊರುಗಳಲ್ಲೆಲ್ಲ ಕಾರ್ಯಕರ್ತರಿದ್ದಾರೆ.... ಹಿಂದೆ ಚರಖಾ ಸಂಘಗಳನ್ನು ಸ್ಥಾಪಿಸಲೆಂದೂ, ಖಾದಿಯ ಮಾರಾಟಕ್ಕೆಂದೂ ಅಡ್ಡಾಡಿದಾಗಲೂ ಹಲವರನ್ನು ಕಂಡು ಪರಿಚಯ ಮಾಡಿಕೊಂಡಿದ್ದೇನೆ...." ನಡುವೆಯೆ ನುಡಿದ ಶಾಂತೇಶ.

"ಹಾಗಾದರೆ ಅಡ್ಡಿಯಿಲ್ಲ. ಇಂದು ಸಂಜೆಗೆ ಆ ಭಾಗಕ್ಕೇನೆ ಹೋಗಬಹುದು......." ಎಂದು ಏನೋ ಧೇನಿಸುತ್ತ ಚಿಕ್ಕಣ್ಣ ಹೇಳಿದ.

"ಅದೆಲ್ಲ ಆಯಿತು; ಹೋಗಲಿಕ್ಕೆ ದಾರಿಯೊಂದು ಬೇಕಲ್ಲ....?" ಅತ್ತ ಹೋಗಲಿಕ್ಕೆ ಇದ್ದುದೊಂದೇ ದಾರಿ, ಹಿರಿಯೂರಿನ ಮೇಲಿಂದ

ಹೋದುದು. ಆ ದಾರಿಯಲ್ಲಿಯೆ ಮಿಲಿಟರಿ ಓಡಾಟವಿದೆ. ಅಲ್ಲದೆ ನಮ್ಮ ಸುಳುಹಿನ ಮೇಲೆಯೇ ಇದ್ದಾರಂತೀರಲ್ಲ....?"

"ಅಹುದು; ಮಿಲಿಟರಿಯವರೇ ಇಲ್ಲೆಲ್ಲ ಸುತ್ತಾಡುತ್ತಿರುವರು.... ನಾನು ಮುಂಜಾನೆ ನಿಮ್ಮನ್ನು ಸಂಸ್ಥಾನದ ಹದ್ದಿಯ ಚಿಕ್ಕೂರಿಗೆ ಹೋಗಿ ರೆಂದು ಕಳುಹಿದೆ; ಅದು ನನ್ನ ತಪ್ಪು ಕಲ್ಪನೆ. ಎಲ್ಲಿ ಹೋದರೂ ಅವರು ಹಿಡಿಯುವರಂತೆ.... ನೀವು ಊರಲ್ಲಿ ಹೋಗದೆ ಇಲ್ಲಿ ದಾರಿಗೇ ಬಂದು ನಿಂತುದು ಒಳ್ಳೆಯದಾಯಿತು....ಈಗ ನೀವು ಬೆಳಗುಂಟ ನಮ್ಮೂರ ಪಶ್ಚಿಮ ಕ್ಕಿರುವ ಕೆರೆಯ ಓರೆಗೆ ಬನ್ನಿ; ನಾನು ನಿಮ್ಮ ಸಾಮಾನುಗಳನ್ನು ಅಲ್ಲಿಗೆ ತಂದು ಮುಟ್ಟಿಸುವೆ. ಮಿಲಿಟರಿಯು ಈಗಾಗಲೆ ಊರಲ್ಲಿ ಬಂದು ಬಿಟ್ಟಂತಿದೆ." ಎಂದು ಚಿಕ್ಕಣ್ಣ ಹೇಳಿದ.

"ಹಾಗೆ ಮಾಡಿರಿ; ಆದರೆ ನಮ್ಮ ಸಾಮಾನುಗಳನ್ನು ಸ್ವಲ್ಪ ಎಚ್ಚರಿಕೆ ಯಿಂದಲೇ ತರಬೇಕು.... ಅದರಲ್ಲಿ ಕೆಲವು ಆಕ್ಷೇಪಾರ್ಹ ಕಾಗದಗಳಿವೆ.... ಅಲ್ಲದೆ 'ಕ್ವಿಟ್ ಇಂಡಿಯಾ'ದ ಒಂದು ಪ್ರತಿಯೂ ಉಂಟು...."

"ಇರಲಿ ನಾನೀಗ ಹೋಗುವೆ. ಆದಷ್ಟು ಎಚ್ಚರಿಕೆಯಿಂದ ತಕ್ಕೊಂಡು ಬರುವೆ. ಪೋಲೀಸಿನವರೂ ನನ್ನ ನಡೆನುಡಿಗಳ ಮೇಲೆಯೇ ಲಕ್ಷ್ಯವಿಟ್ಟಂತಿದೆ. ಬರುವಾಗ ಎಲ್ಲಿ ನಡೆದಿರೆಂದು ಓಲೆಕಾರನೊಬ್ಬ ಕೇಳಿದ.... ಚಿಕ್ಕೂರ ಪೋಷ್ಟ ಆಫೀಸಿನಲ್ಲಿ ಸ್ವಲ್ಪ ಕೆಲಸವಿದೆಯೆಂದು. ಹೇಳಿ ಬಂದೆ.... ಬಹಳ ತಡವಾದರೆ.... ಮತ್ತೇನಾದರೂ ತರ್ಕ ಕಟ್ಟಿ ನಮ್ಮ ಮನೆ ಹೊಕ್ಕಾರು ಎಲ್ಲವೂ ತಪ್ಪೀತು- ಇನ್ನೂ ನಿಮ್ಮ ಸಾಮಾನುಗಳೆಲ್ಲ ಮನೆಯಲ್ಲಿಯೆ ಇವೆ.... ನೀವೂ ಆದಷ್ಟು ಬೇಗನೆ ಬನ್ನಿ ನಿಮಗೂ ಸಂಜೆ ಯಾಗುವುದು...." ಎಂದು ಚಿಕ್ಕಣ್ಣ ಹಾದಿಯ ಕಡೆಗೆ ನಡೆದ.

"ಆದಷ್ಟು ಮಿಲಿಟರಿಯ ಸುಳಿದಾಟವನ್ನು ತಿಳಿದುಕೊಂಡೇ ಬರ್ರಿ?" ಎಂದು ರಾಮು ಕಳ್ಳದನಿಯಿಂದ ಕೂಗಿ ಹೇಳಿದ....

ಚಿಕ್ಕಣ್ಣನು ಶಾಂತೇಶನ ಅರಿವೆ-ಕಾಗದ ಗಂಟುಗಳೆಲ್ಲವನ್ನೂ ಒಂದು ದೋತರದಲ್ಲಿ ಸುತ್ತಿ ಬಗಲಲ್ಲಿ ಹಿಡಿದುಕೊಂಡು, ಕೈಯಲ್ಲಿ ತಂಬಿಗೆ ತಕ್ಕೊಂಡು ಮನೆಯಿಂದ ಹೊರಬಿದ್ದ. ಮೈಯಲ್ಲೊಂದು ಹಾಪ್ ಶರ್ಟು,

ತಲೆಯ ಮೇಲೆ ಟೊಪ್ಪಿಗೆ ಇಲ್ಲ. ಜನಿವಾರವನ್ನು ಕಿವಿಗೆ ಹಾಕಿದ್ದ. ಚಿಕ್ಕಣ್ಣನ ಈ ಸೋಗನ್ನು ಕಂಡು.... ಈತ ಧೋತರ ಒಗೆಯಲು ಕೆರೆಗೆ ನಡೆದಿದ್ದಾನೆಂದೇ ಯಾರೂ ಭಾವಿಸುವಂತಿತ್ತು.... ಆದರೂ ಚಿಕ್ಕಣ್ಣ ಮನೆಯಿಂದ ಹೊರಬೀಳುತ್ತಿರುವಾಗಲೇ ಒಬ್ಬ ಪೋಲೀಸನೂ ಅವರ ಮನೆಯ ಮುಂದಿನಿಂದಲೇ ಹಾಯ್ದು ಹೋದ; ಮೇಲಾಗಿ ಅವರ ಮನೆಯ ಕಡೆಗೆ ಪರೀಕ್ಷಿಸುತ್ತ ಹೋದ ಬೇರೆ.... ಚಿಕ್ಕಣ್ಣನಿಗೂ ಹೆದರಿಕೆಯಾಯಿತು. ತನ್ನ ಮೇಲೆಯೆ ಇವರಿಗೆ ಪೂರ್ಣ ಸಂಶಯವಿದೆಯೆಂದು ಅರಿತ. ಆದರೂ ಧೈರ್ಯದಿಂದ ಹಾಗೆಯೆ ಹೋಗಿ ಬಿಟ್ಟ. ಚಿಕ್ಕಣ್ಣ ಸ್ವಲ್ಪ ಮುಂದೆ ಹೋಗವಷ್ಟರಲ್ಲಿ ಯಾರೋ ಒಬ್ಬರು "ಯಾಕರೀ ಬಿಸಲಾಗs ಹೊರಬಿದ್ದಿರಿ?" ಎಂದು ಚಿಕ್ಕಣ್ಣನನ್ನು ಕೇಳಿದರು.

ಕೂಡಲೆ ಚಿಕ್ಕಣ್ಣನು "ಮುಂಜಾನೆ ಊರಿಂದ ಬಂದೆ; ಸ್ನಾನ ಮನೆಯಲ್ಲಿ ಆಯಿತು. ಧೋತರ ಒಕ್ಕೊಂಡು ಬರುವೆ...." ಎಂದು ಹೇಳಿ ಮುನ್ನಡೆದ. ಪೋಲೀಸಿನವರಿಗೂ ಅದು ಕೇಳಿಸಿತೇನೋ! ಅವನೂ ಏನನ್ನೋ ಮನದಲ್ಲಿ ಮಂಡಿಗೆ ಮಾಡಿ, ಗೌಡರ ಮನೆಯೆತ್ತ ಅವಸರದಿಂದ ಸಾಗಿದ.

ಈಗಾಗಲೇ ಮಿಲಿಟರಿಯು ಚಿಕ್ಕಣ್ಣನ ಮನೆಯನ್ನು ಸುತ್ತುಗಟ್ಟಿ ಹೋಗಬೇಕಾಗಿದ್ದು, ಆದರೆ ಮಿಲಿಟರಿ ಜನರೆಲ್ಲ ನರಸೀಪುರದಿಂದ ಬರಲು ಸ್ವಲ್ಪ ವಿಲಂಬವಾಗಿದ್ದಿತು. ಯಾಕೆಂದರೆ ಮಿಲಿಟರಿ ಮೋಟಾರುಗಳಿಗೆ ಬರಲಿಕ್ಕೆ ಅನುಕೂಲವಾದ ದಾರಿಯಿರಲಿಲ್ಲ. ನಡುವೆ ಹೊಳೆಯೊಂದನ್ನು ದಾಟ್ಬೇಕಾಗಿದ್ದಿತು. ಹೀಗಿದ್ದರೂ ಮುಂಚಿತ ಬಂದ ಜನರು ಚಿಕ್ಕಣ್ಣನ ಮನೆಯ ಮೇಲೆ ಲಕ್ಷ್ಯವಿಟ್ಟೇ ಇದ್ದರು.

ಚಿಕ್ಕಣ್ಣ ಊರ ಹೊರಗೆ ಸ್ವಲ್ಪ ದೂರ ಹೋಗಿದ್ದ. ಹಿಂದಿನಿಂದ ಯಾರೋ ಕೂಗಿ ಹೇಳಿದಂತಾಯಿತು.

"ಚಿಕ್ಕಣ್ಣಾ ನಿಮ್ಮ ಮನೆಯಲ್ಲಿ ಪೋಲೀಸಿನವರು ಹೊಕ್ಕಿರುವರು.... ಅಜ್ಜಿ ಕರೆಯುತ್ತಿರುವಳು, ನಿಮ್ಮನ್ನು !"

ಚಿಕ್ಕಣ್ಣ ಕೇಳದವನಂತೆ ಹಾಗೆಯೆ ಮುನ್ನಡೆದ. 'ಯಾರೇ ಬರಲೊಲ್ಲರೇಕೆ ? ಅಜ್ಜಿಗಂತೂ ಹೆದರದಂತಿರಲು ಹೇಳಿ ಬಂದಿರುವೆ.... ಮನೆಯಲ್ಲಿ ಆಕ್ಷೇಪಾರ್ಹ ವಸ್ತುಗಳೇನೂ ಇಲ್ಲ. ಹಿಂದಿನಿಂದ ಏನೇ ಆಗಲಿ, ಈಗ

ಶಾಂತೇಶನೊಬ್ಬ ಪಾಠಾದನಲ್ಲ....!" ಎಂದು ಯೋಚಿಸುತ್ತಿರುವಾಗಲೇ ಗೊತ್ತಾದ ಸ್ಥಳವನ್ನು ತಲುಪಿದ ಚಿಕ್ಕಣ್ಣ.

ಅಷ್ಟರಲ್ಲಿ ಶಾಂತೇಶ, ರಾಮು ಅಲ್ಲಿ ಬಂದಿದ್ದರು. ಚಿಕ್ಕಣ್ಣ ಬರುವ ದಾರಿಯನ್ನೇ ಕಾಯುತ್ತಿದ್ದರು. ಚಿಕ್ಕಣ್ಣ ಕೆರೆಯ ಸಮೀಪದ ಮೊರಡಿಯ ಓರೆಯೊಂದರಲ್ಲಿ ಅವರಿಬ್ಬರಿಗೂ ಕುಳ್ಳಿರ ಹೇಳಿ, ತಂಬಿಗೆಯಲ್ಲಿ ತಾನು ತಂದ ಸಕ್ಕರೆ ಹಾಕಿದ ಹಾಲು ಕುಡಿಯಲು ಕೊಟ್ಟ. ಇಬ್ಬರೂ ಹಾಲು ಕುಡಿದು ಹೊರಡಲು ಸಿದ್ಧರಾದರು.

ಮುಂದಿನ ಕಾರ್ಯಕ್ರಮ ನಿಶ್ಚಯವಾದ ಮೇಲೆ ನನಗೆ ತಿಳುಹಿರಿ. ಆಗಾಗ ಕಾಗದ ಬರೆಯುತ್ತ ಇರಿ. ಸಾಧ್ಯವಿದ್ದಷ್ಟು ನಾನೂ ನೆರವಾಗುವೆ. ಪತ್ರ ಬರೆಯುವಾಗ ಹೆಸರನ್ನು ಬದಲಿಸಿ ಇಟ್ಟುಕೊಳ್ಳಿ....ಕವಿಗಳಂತೆ...." ಎಂದು ಮುಗುಳುನಗೆಯೊಡನೆ ಹೇಳಿ, ಚಿಕ್ಕಣ್ಣ ಇಬ್ಬರನ್ನೂ ಬೀಳ್ಕೊಟ್ಟನು. ಆಗ ಆ ಮೂವರ ಮುಖದ ಮೇಲೆ ವಿಜಯಶ್ರೀಯು ನಲಿಯುತ್ತಿದ್ದಳು.



# ಈರ ಯಾಕೆ ಹೋದ?

ಅಂದು ಶನಿವಾರ. ಸ್ವಲ್ಪ ಬೇಗನೆ ಪಾಠ ಮುಗಿಸಿ ಮನೆಗೆ ಹೋಗಬೇಕೆಂದಿದ್ದೆ. ಹೋಗುವಾಗ ಗೌಡರ ಹತ್ತಿರ ನಾಲ್ಕು ಮಾತು ಆಡಿ ಹೋಗುವದು ದಿನದ ರೂಢಿ. ಆದರೆ ಇಂದು ಗೌಡರೇನೋ ತಮ್ಮೊಬ್ಬ ರೈತನಿಗೆ ಬಾಯಿಮಾಡುತ್ತಿದ್ದರು. ಈರ....ಆ ರೈತನ ಹೆಸರು.... " ಬಾಂವಿಗೆ ನೀರs ಇಲ್ಲ. ಎರಡು ನೂರು ಸಲ ಹೇಳ್ಕೊಂಡೆ. ನೀವ್ ಕಿವೀಗೇ ಹಾಕ್ಕೊಳ್ಳಿಲ್ಲ. ನೋಡ್ದಕ್ಕ ನಾನs ತಗಿಸಿದೆ. " ಎಂದು ಏನೇನೋ ನಮ್ರತೆಯಿಂದ ಹೇಳುತ್ತಲಿದ್ದ! ಅವನು ಮೆತ್ತಗೆ ಮಾತಾಡಿದಷ್ಟೂ ಗೌಡರ ದನಿ ಬಿರುಸಾಗುತ್ತಲಿದ್ದಿತು: ' ಕೊಳಚೆಯನ್ನು ಕೇಳದೆ ಯಾಕೆ ತಗಿಸಿದೆ? ' ಎಂದರು. ಮನೆಗೆ ಬೇಗನೆ ಹೋಗಬೇಕೆನ್ನುವ ನನಗೆ ಇದೊಂದು ಅನುಕೂಲವಾಗಿಯೆ ಪರಿಣಮಿಸಿತು. ಆದರೆ ತಲೆಯಲ್ಲೊಂದು ವಿಚಾರ ತರಂಗವನ್ನೆಬ್ಬಿಸಿ ಬಿಟ್ಟಿತು ಆ ಪ್ರಸಂಗ: ' ಬಾವಿಯ ಕೊಳಚೆಯನ್ನು ಕೇಳದೆ ತೆಗೆಯಿಸಿದರೆ ರೈತನದೇನು ತಪ್ಪು? .. ಅದರಲ್ಲಿ ಗೌಡರದೇನು ಹಾನಿ . .? ' ಎಂದು ಮೊದಲಾದ ವಿಚಾರಮಾಲಿಕೆಯು ಮುಗಿಯುವುದರಲ್ಲಿ ಮನೆಯನ್ನು ಮುಟ್ಟಿದ್ದೆ ನಾನು.

ಲಲಿತೆ ಅದಾಗಲೇ ಮಲಗಿಕೊಂಡಿದ್ದಳು. ಅದರಿಂದ ನನ್ನ ವಿಚಾರಗಳಿಗೇನೂ ತೊಂದರೆಯೊದಗಲಿಲ್ಲ. ವಿಚಾರಮಾಲಿಕೆಯನ್ನು ಮುಡಿಯುತ್ತ ಮನಸ್ಸು ಮುಂದೆ ಸಾಗಹತ್ತಿತು. ಒಂದೆಡೆಗೆ ಒಪ್ಪೊತ್ತಿನ ಗಂಜಿಗೆ ಗತಿಯಿಲ್ಲದೆ ' ಅಯ್ಯೋ ಹೊಟ್ಟೆ! ಅಯ್ಯೋ ಹೊಟ್ಟೆ! ' ಎನ್ನುವ ಎಷ್ಟೋ ಕಂಗಾಲರ ಕೂಗು; ಆದರೆ ಇನ್ನೊಂದೆಡೆಗೆ ಹಣಗಾರರು ಕೊಬ್ಬಿದ ಗೂಳಿಯಂತೆ ಮನಬಂದಂತೆ ತಿಂದುಂಡು ಅಜೀರ್ಣವಾಗಿ ಬಿಡುವ ಕಮರುದೇಗು! ಒಂದೆಡೆಗೆ–ಲಂಗೋಟಿಗೆ ಗತಿಯಿಲ್ಲದೆ ಒಳಹೊಕ್ಕ ಹೊಟ್ಟೆಯಲ್ಲಿ ಕೈಕಾಲುಗಳನ್ನು ಅವಚಿಕೊಂಡು ' ಚಳಿ! ಚಳಿ! ' ಎನ್ನುತ್ತಿರುವ ಬಡವರ ನಡುಗು! ಮತ್ತೊಂದೆಡೆಗೆ–ಕೋಟುಜಾಕೀಟುಗಳನ್ನು ತೊಟ್ಟುಕೊಂಡು, ಬಡವರ ಬಗ್ಗರಮೇಲೆ ಅನ್ಯಾಯ ಅತ್ಯಾಚಾರಗಳಿಂದ ' ಹುರ್ ಹುರ್ ', ಎಂದು ಮೆರೆದಾಡುವ

ಸಾವುಕಾರರ ಸಿಡುಕು! ದುಡ್ಡುಳ್ಳವರು ದುಂದುಗಾರಿಕೆಯನ್ನು ಬಿಟ್ಟರೆ, ಬಡವರಿಗೆ ಹೊಟ್ಟೆತುಂಬ ಅನ್ನ ಮೈತುಂಬ ಬಟ್ಟೆಯಾದರೂ ಆಗಬಹುದಲ್ಲ!

ಇವೇ ಮೊದಲಾದ ವಿಚಾರಗಳಿಂದ ಇರುಳು ನಿದ್ರೆ ಬೇಗ ಬಂದಿರಲಿಲ್ಲ. ಅಂತೆಯೆ ಬೆಳಗಿನಲ್ಲಿ ಬೇಗನೆ ಎಚ್ಚರಾಗಲಿಲ್ಲ. ಎಚ್ಚರು ಆಗುವುದೊಂದೇ ತಡ, ಮತ್ತೆ ಮುಂಚೆ ಬಂದಿತು ಆ ಈರನ ಚಿತ್ರ. ಅದೇಕೋ, ಈರನನ್ನು ನಾನು ಮೊದಲನೆಯ ಸಲ ಕಂಡಾಗ—ನಡತೆಯೊಳಗಿನ ನಯವನ್ನು ನೋಡಿದಾಗ—ಒಮ್ಮೆಲೆ ಅವನನ್ನು ಮೆಚ್ಚಿಬಿಟ್ಟಿದ್ದೆ. ನಿನ್ನೆಯ ಅವನ ದೈನ್ಯ ಭಾವವನ್ನು ಕಂಡು ಮನಸ್ಸು ಮರುಗಿತ್ತು. ಇಂದು ಅವನ ಸ್ಥಿತಿಗತಿಗಳನ್ನು ಸಂಪೂರ್ಣ ಅರಿತುಕೊಳ್ಳಬೇಕು; ಆವಶ್ಯವಿದ್ದರೆ ನೆರವಾಗಬೇಕು!" ಎಂದು ಮನಸ್ಸು ಹರಿಯಹತ್ತಿತು ತೋಟದ ದಾರಿಯೂ ಗೊತ್ತಿದ್ದಿತು; ಕೂಡಲೆ ತಂಬಿಗೆಯೊಂದನ್ನು ಕೈಯಲ್ಲಿ ತಕ್ಕೊಂಡು ಹೊರಟೇಬಿಟ್ಟೆ.

'ಕಲ್ಲಹಳ್ಳ' ಎಂಬುದು ಕಟ್ಟಡವಿಯೊಳಗಿನ ಹಳ್ಳ; ಹಳ್ಳಕ್ಕೆ ಹನ್ನೆರಡು ತಿಂಗಳೂ ನೀರು. ನೆರೆಯಲ್ಲಿ ಅಗಿದ ಬಾವಿಗಳಿಗಂತೂ ತುಂಬ ನೀರು. ಸುತ್ತಲಿನ ಭೂಮಿಯೂ ಕಸುವಿನದು. ಆದರೆ ಸಾಗುವಳಿ ಮಾಡದ ನೆಲ. ಅಲ್ಲಿರುವುವೆಲ್ಲ ವತನದಾರರ ಜಮೀನುಗಳು, ಅವಕ್ಕೆ ಇರುವ ತೆರಿಗೆ ತುಸು, ಉಳಿದ ಕಡೆಗೆ ಅವರ ಭೂಮಿ ಬಹಳ—ಹೀಗಾಗಿ ಆ ಭೂಮಿಯ ಸಾಗುವಳಿ ಮಾಡುವ ಅಗತ್ಯವೇ ಅವರಿಗಿರಲಿಲ್ಲ. ಅಂತೆಯೆ ಆ ಪ್ರದೇಶವೆಲ್ಲ ಹುಲ್ಲು ಬೆಳೆದು ಬೇಸಾಯಕ್ಕೆ ಬಾರದ ಬೀಳುಭೂಮಿಯಾಗಿತ್ತು. ಅದರ ಉಪಯೋಗವೆಂದರೆ ಊರ ಜನರ ದನಗಳಷ್ಟು ಅಲ್ಲಿ ಮೇಯಲು ಹೋಗುತ್ತಿದ್ದುದಿಷ್ಟೇ.

ಇಂತಹ ಪ್ರದೇಶದಲ್ಲಿದ್ದುದು ಈರನ ಅಲ್ಲಗೌಡರ-ತೋಟ. ಊರುಬಿಟ್ಟು ಮೂರು ಮೈಲಿನ ಮೇಲೆ. ಎಂದೋ ಹಿರಿಯರು ತೋಡಿಸಿದ ಭಾವಿ; ಮೊನ್ನೆ ಮೊನ್ನೆಯವರೆಗೂ ಹಾಳು ಬಿದ್ದಿತ್ತು. ಈರ ಗಟ್ಟಿಗ. ಪರಸ್ಥಳದಿಂದ ಹೊಟ್ಟೆ ಹೊರೆಯುವುದಕ್ಕೆಂದು ಗುಳೇಕಟ್ಟಿ ಬಂದವ. ಹೀಗೆ ಬಂದಾಗ ಭೂಮಿಯನ್ನು ಒಮ್ಮೆಲೆ ಯಾರು ಕೊಡಬೇಕು? ಗೌಡರು ಕೊಟ್ಟದ್ದು ಬೀಳುನೆಲವೆಂದು. ಅವನೂ ಒಲ್ಲೆನೆನ್ನದೆ ಲಾವಣಿಗೆ ಹಿಡಿದ; ಮೈಮುರಿದು ದುಡಿದು ಈಗ ಆ ತೋಟದಲ್ಲಿ ವರ್ಷಾ ನಾಲ್ಕೈದು ನೂರು ರೂಪಾಯಿ ಉತ್ಪನ್ನ ಬರು

ವಂತೆ ಮಾಡಿದ. ಗೌಡರಾದರೊ ಅವನ ಕುಟುಂಬಕ್ಕೆ ಬೇಕಾಗುವಷ್ಟನ್ನು—ಬಡರ್ಶೈತನ ಹೊಟ್ಟೆ ಬಟ್ಟೆಗೆ ತಕ್ಕಷ್ಟು—ಬಿಟ್ಟು, ಹೆಚ್ಚಿನದನ್ನೆಲ್ಲ ತಮ್ಮ ಮನೆ ತುಂಬಿಕೊಳ್ಳುತ್ತಿದ್ದರು. ಅವನೂ ಅದಕ್ಕೆ ಮರುಮಾತನ್ನಾಡುತ್ತಿರಲಿಲ್ಲ. ಅನ್ನವಿಲ್ಲದೆ ಅಲೆಯುತ್ತಿದ್ದಾಗ ಆಶ್ರಯಕೊಟ್ಟರೆಂದೋ? ಅಲ್ಲ. 'ಜೀತಪಾಳಿನಂತೆ ದುಡಿದರಾಯಿತು. ಎಲ್ಲವೂ ಅವರದೇ ಅದೆ. ನಮ್ಮದೇನು? ಹತ್ತುವಷ್ಟು ಕೊಡುತ್ತಾರಲ್ಲ. ಹೆಚ್ಚಿನ ಮಾತು ನಮಗೇಕೆ ಬೇಕು?' ಎಂದು. ಈಸಲವೂ ಕಬ್ಬು ಹಚ್ಚಿದ್ದಾನಂತೆ. ಚೆನ್ನಾಗಿ ಬೆಳೆದರೆ, ಬರುವ ಬೇಸಗೆಗೆ ಹಿರಿಯ ಮಗ ನಿಂಗನ ಮದುವೆ ಮಾಡಬೇಕೆಂಬಾಶೆಯಂತೆ. ಅವನಿಗೆ. ಗೌಡರ ಮುಂದೆಯೂ ಒಂದೆರಡು ಸಲ ಇದನ್ನು ಹೇಳಿದನಂತೆ ಕೇಳಿ ಅವರು ಸುಮ್ಮನಾದರಂತೆ! ಈ ಸಂಗತಿಯನ್ನು ಅವನೇ ಮೊನ್ನೆ ಹೇಳುತ್ತಿದ್ದ. ಗೌಡರೂ ಒಂದೆರಡು ಸಲ ಅವನ ಎದುರಿಗೇ ಅವನ ದುಡಿಮೆಯಬಗ್ಗೆ ಹೊಗಳಿದ್ದನ್ನು ಕೇಳಿದ್ದೆ. ಆದರೆ ನಿನ್ನೆ ಹಾಗೇಕೆ ಬಾಯಿಮಾಡುತ್ತಿದ್ದರೋ? ಮನಸ್ಸು ಈರನ ತೋಟಪಟ್ಟಿಗಳನ್ನು ನೆನೆಯುತ್ತಿದ್ದಂತೆಯೇ ಕಾಲುಗಳೂ ಅತ್ತಕಡೆಗೇ ಹರಿಯುತ್ತಿದ್ದುವು. ತಾಸೆರಡುತಾಸು ಹೊತ್ತೇರುವಷ್ಟರಲ್ಲಿ ತೋಟಕ್ಕೆ ಬಂದು ತಲುಪಿದೆ. ಕಬ್ಬು ಚೆನ್ನಾಗಿ ಬೆಳೆದಿವೆ; ಆದರೆ ಈಗ ಬಾಡುತ್ತಲಿವೆ. ಬಾಡದೆ ಏನುಮಾಡೀತು? ನಾಲ್ಕಾರು ದಿನ ನೀರೇ ಹಾಯಿಸಿಲ್ಲ. ಹಾಯಿಸುವುದಾದರೂ ಎಲ್ಲಿಂದ? ಬಾವಿಯಲ್ಲಿ ನೀರು ಇದ್ದರಷ್ಟೆ? ಬಾವಿಯ ಮೇಲೆ ಹೋಗಿನಿಂತೆ; ಒಳಗೆ ಮೂರು ನಾಲ್ಕು ಹುಡುಗರು ಕೊಳಚೆಯನ್ನು ತುಂಬುತ್ತಲಿದ್ದರು. ಎಲ್ಲರೂ ಎಳೆಯ ಮಕ್ಕಳು, ಒಬ್ಬಮಾತ್ರ ಹಿರಿಯ ಹುಡುಗ. ಆತ ಸುಮಾರು ಹನ್ನೆರಡು ವರ್ಷದವನಿರಬಹುದು. ಅವನೇ ಹೆಡಿಗೆ ಹೊತ್ತು ಮೇಲೆ ತರುವವ. ಇದೀಗ ಹೆಡಿಗೆತುಂಬುವುದಾಯಿತೇನೋ! ಒಬ್ಬ ಹುಡುಗ ಹೇಳಿದ: 'ಸಾಕಿನ್ನ, ಅಣ್ಣಾಗ ಒಜ್ಜೆ ಆಗ್ತೈತಿ' ಎಂದು. ಮತ್ತೊಬ್ಬ ಕಿರಿಯಹುಡುಗ 'ಮರತು ಹಾಂಗs ತುಂಬಿದ್ನಲ್ಲೋ' ಎಂದು ಸ್ವಲ್ಪ ಕೊಳಚೆಯನ್ನು ಹೆಡಿಗೆಯೊಳಗಿಂದ ತೆಗೆದು ಮತ್ತೊಂದು ಹೆಡಿಗೆಯಲ್ಲಿ ಹಾಕಹತ್ತಿದ. ಹಿರಿಯ ಹುಡುಗ 'ಇರಲಿ ಬಿಡೋ' ಎಂದು ಹೆಡಿಗೆಯನ್ನು ಎತ್ತಲು ಹೋದ; ಆದರೆ ಎತ್ತಲಿಕ್ಕಾಗಲಿಲ್ಲ. ಎಲ್ಲರೂ ಕೈಹಚ್ಚಿದರು; ಹೆಡಿಗೆ ಎತ್ತಹತ್ತಿ

ದರು. ಮೈಮೇಲೆ ಕೊಳಚೆ ಸುರಿಯುತ್ತಲಿತ್ತು. ಹಾಗೆಯೆ ಹಿರಿಯ ಹುಡುಗ ಹೆಡಿಗೆ ಹೊತ್ತು ಮೇಲೆ ಬರಹತ್ತಿದ. ಕಾರಿಯ ಕಟ್ಟಿಗೆಯಂತಹ ಕಾಯ; ಲಂಗೋಟೀಯನ್ನುಳಿದು ಮೈಮೇಲೆ ಬೇರೆ ಬಟ್ಟೆಗಳಿಲ್ಲ. ಹುಡುಗ ಮೇಲಕ್ಕೆ ಬಂದ. ನನ್ನನ್ನು ಬೆರಗುಗಣ್ಣಿನಿಂದ ನೋಡಿದನಿಷ್ಟೆ; ಮಾತಾಡಿಸುವ ಧೈರ್ಯ ಸಾಲಲಿಲ್ಲವೇನೊ! ಹೆಡಿಗೆಯೊಳಗಿನ ಕೊಳಚೆಯನ್ನು ಚೆಲ್ಲಿ ಬಾವಿಯಲ್ಲಿ ಇಳಿಯತೊಡಗಿದ. ಆಗ ನಾನು ಕೇಳಿದೆ: "ಈರ ಇಲ್ಲೇನು?"

"ಅಂವ ನೆನ್ನಿ ಊರೊಳಗ ಹೋದಾಂವ ಇನ್ನೂ ಬರಲಿಲ್ಲರಿ!" ಧ್ವನಿಯಲ್ಲಿ ವ್ಯಾಕುಲತೆ ಇಡುಗಿತ್ತು. ಅಣ್ಣ ಯಾರೊಡನೆ ಮಾತಾಡಿದನೆಂದು ಮೇಲೆ ನೋಡಿದರು ಆ ಹುಡುಗರು. ಅಪರಿಚಿತನಾದ ನನ್ನನ್ನು ಕಂಡು ಮೇಲೆಯೇ ಬಂದು ಬಿಟ್ಟರು, ಮೈ—ಕೈ ಕೆಸರು, ಬಣ್ಣ ಕಪ್ಪು! ಆದರೂ ಎಷ್ಟು ಮುದ್ದು ಸುರಿಯುವ ಮಕ್ಕಳವರು! ನಿಸರ್ಗದೇವತೆ ನಿರ್ಮಿಸಿ ಬೆಳೆಯಿಸಿದ ನಗ್ನ ಪುತ್ಥಳಿಗಳವು! ಹುಡುಗರು ನನ್ನನ್ನೊಮ್ಮೆ ನೋಡಿ, ಅಣ್ಣನ ಕಡೆಗೆ ಕುತೂಹಲದೃಷ್ಟಿಯಿಂದ ನೋಡತೊಡಗಿದರು. 'ಕುಂದ್ರಿ, ಅಪ್ಪಾ ಈಗ ಬಂದಾನ ನೋಡೋನು' ಎಂದು ಹಿರಿಯ ಹುಡುಗ ಹೇಳಿದ. ಅಲ್ಲೇ ಕಲ್ಲಿನಮೇಲೆ ಕುಳಿತೆ. ನಸುವೇಳೆಯಲ್ಲಿಯೆ ಈರ ಕಾಣಿಸಿದ. ಮುಖ ಬಾಡಿತ್ತು; ಕಾಲುಗಳನ್ನು ಎಳೆಯುತ್ತ ಕೆಳಗೆ ಮೋರೆಮಾಡಿ ಬರುತ್ತಿದ್ದ. ನನ್ನನ್ನು ಕಂಡಿರಲಿಲ್ಲ. ನಾನೇ ಅವನನ್ನು ಕೂಗಿದೆ.

"ಈರಪ್ಪಾ!"

"ಆಂ.... ಇತ್ತೆಲ್ಲಿ ದ್ಯಾವ್ರು?"

"ನಿನ್ನ ಕಡೇನೇ!"

"ನೆನ್ನಿ ಸಂಜೀನಾಗ ಭೇಟಿ ಆಗಿತ್ತಲ್ಲಾ ರಾಯರ!"

"ಹೌದು, ಈ ಹೊತ್ತೂ ಭೇಟಿ ಆಗಬೇಕೂ ಅಂತ ಅನಿಸಿ...."

"ಅದ್ಯಾಕ . . . . ಬುದ್ಧಿ ..."

ಈರ ನನ್ನ ಮುಖವನ್ನು ಕೆಲವು ನಿಮಿಷಗಳ ವರೆಗೆ ಕುತೂಹಲ ದೃಷ್ಟಿಯಿಂದ ನೋಡಿದ. ಕಾಲೊಳಗಿನ ಕೆರವುಗಳನ್ನು ಅಲ್ಲಿಯೇ ದೂರದಲ್ಲಿ ಬಿಟ್ಟು, ಸ್ವಲ್ಪ ಮುಂದೆಬಂದು ಒಂದು ಕಲ್ಲಿನ ಮೇಲೆ ಕುಳಿತ. ತನ್ನ ಹಿರಿಯ ಮಗನ ಕಡೆಗೆ ನೋಡಿ ಹೇಳಿದ:

" ನಿಂಗಾ ಆಕಳ್ನಷ್ಟ ಹಿಂಡಕೊ ಲಗೂನs ಹಾಲೊಂದsಟ ತಗೊಳ್ಳಿ ಮಾಸ್ತರಸಾಬರು! "

" ಈರಪ್ಪಾ, ಹಾಲ್ಗೀಲೇನೂ ಈಗ ಬೇಡ–ನಾ ಲಗೂನ ಹೋಗ್ಬೇಕು. "
" ಹೋಗರೆಂತೇಳ್ರಿ!....! ನೀವ್ಯಾನ ವ್ಯಾಲಿಂದವ್ಯಾಲ ದೊರಕ್ತೀರಿ ಇನ? ಜಗ್ಗಿದ ದನಿಯಲ್ಲಿ ಈರ ನುಡಿದ ಹೋಗುವ ಹುಡುಗನ ಕಡೆಗೆ ಹೊರಳಿ— ' ನಿಂಗಾ, ಚರಗೀ ತೊಳ್ದು ಬಿಸಲ್ಗಿಟ್ಟು ಆ ವ್ಯಾಗ ಕಾಗರ ಬಿಡು ಅಂ!" ಎಂದು ಹೇಳಿ ನನ್ನ ಕಡೆಗೆ ಮುಖ ತಿರುವಿದಾಗ, ಅವನ ಕಣ್ಣು ಗಳು ನಸುಗೆಂಪಾಗಿದ್ದುವು. ಅವುಗಳಲ್ಲಿ ಸ್ವಲ್ಪ ನೀರೂ ಬಂದಂತೆ ತೋರಿತು. ನನ್ನ ಎದೆ ದಡದಡಿಸಿತು "ಏನು ವಿಶೇಷ ?" ಎಂದೆ

" ಯಾನ ಇಲ್ಲ ರಾಯರs !" ಎಂದು ನಗೆಯೊಂದನ್ನು ಬೀರಿ ಹೃದಯದ ನೋವನ್ನು ಅಡಗಿಸಲು ಈರ ಯತ್ನಿಸಿದ. ಸ್ವಲ್ಪ ಹೊತ್ತು ನೀರವ, ನಿಶ್ಶಬ್ದ— " ನೆನ್ನಿ ಗೌಡ್ರ ಹತ್ರ ನಿಮ್ಮನ್ನ ಹ್ಯಾಂಗ ಮಾತಾಡ್ತೋದಂತ ಬಿಟ್ನ ರಾಯರs!—" ಎಂದು ಮಾತನ್ನು ಪೂರ್ಣ ಮಾಡಲು ಹವಣಿಸಿದ.

" ಹೌದು; ನಾನೂ ಹಾಗೇ ತಿಳಕೊಂಡೆ; ಅದಕ್ಕs ಈಗ ಬಂದೆ!"

" ತಾವು ದೇವ್ರಂಗ ಇದ್ದೀರಿ ನೋಡ ನನ್ನೊಡ್ಯಾ! "

" ಅಂದರೆ ಏನೋ ?"

" ಸುಮ್ನ ಯಾನ್ರೀ ಇಲ್ತಂಕಾ ಬರಬೇಕಂದ್ರ..... ಮಸಿಮುಟ್ಟಿ ಹ್ವಾದ್ರೂ ಮಾತಾಡುದಿಲ್ಲ ದ್ಯಾವ್ರೂ!"

ಅತ್ತ ಕಡೆಗೆ ನಿಂಗ ಕೂಗಿ ಕೇಳಿದ: " ಅಪ್ಪಾ ಅಲ್ಲೇ ತಗೊಂಡು ಬರಲೇನು?" ಎಂದು. " ನನಗೆ ಹಾಲು ಬೇಡ " ಎಂದೆ. ಅವನು ನೊಂದುಕೊಂಡ; ಬಿಸಿಯುಸಿರೊಂದನ್ನು ಬಿಟ್ಟ. ಆ ಉಸುರಿಗೆ ನನ್ನ ಹೃದಯ ಕರಗಿತೇನೋ! ನನ್ನ ಹೊಟ್ಟೆಯಲ್ಲೂ ಕಲಕುಮಲಕಾಯಿತು. ಕೂಡಲೆ ನಾನಾಗಿಯೇ ಹೇಳಿದೆ— 'ಇಲ್ಲ; ಇಲ್ಲೇನೂ ಬೇಡ ಅಂದೆ ನಿಷ್ಟೇ! ಅಲ್ಲೇ ಹೋಗೋಣ! " ಎಂದು ಎದ್ದೆ. ಅವನು ಸ್ವಲ್ಪ ಹಿಂಜರಿದ. ಆದರೂ ಕೆರವನ್ನು ಕಾಲಿಗೆ ಸಿಕ್ಕಿಸಿಕೊಂಡು ನನ್ನ ಮುಂದೆ ನಡೆದ. ಒಂದು ಸಲ ಹಿಂದೆ ಹೊರಳಿ ನೋಡಿದೆ. ಹಳ್ಳದೊಳಗೆ ನೀರು

ಜುಳುಜುಳು ಹರಿಯುತ್ತಿದ್ದಿತು. ಮೆಲುಗಾಳಿ ಸುಯ್ಯೆಂದು ಗಿಡಗಳ ಸಂದಿಯೊಳಗಿಂದ ಸುಳಿಯಿತು. ಸೂರ್ಯ ಸಾವಕಾಶ ಮೇಲಕ್ಕೇರುತ್ತ ಲಿದ್ದ. ಬಿಸಿಲಿಗೆ ಬೆದರಿ ಗಿಡಗಳು ತಮ್ಮ ನೆರಳನ್ನು ನೆರೆಯಲ್ಲಿ ಕರೆದು ಕೊಳ್ಳುತ್ತಲಿವೆಯೋ ಎನ್ನುವಂತೆ, ನೆರಳುಗಳು ಗಿಡಗಳನ್ನು ಸಮೀಪಿ ಸುತ್ತಲಿವೆ. ಹುಲ್ಲುಗಾವಲದೊಳಗಿನ ಕಾಲುದಾರಿ.

" ಈರಪ್ಪಾ," ಎಂದೆ.

" ಏನ್ನಾ್ಯವ್ರಿ? "

" ನಿನ್ನ ಮನೆ ಎಲ್ಲಿ ? "

" ಅಲ್ಲಿ; ದೂರದಲ್ಲಿ ಆ ಮೊರಡೀ ತುದೀಲಿ! "

" ಅಷ್ಟು ದೂರ ? "

" ಹೌದು ರಾಯರs, ಇಲ್ಲಿ ಹಳ್ಳದ ನೆರೀಲಿ, ರಾತ್ರಿ ಕಾಡಹಂದಿಗಳ ಕಾಟ! "

" ರಾತ್ರಿ ಬಾಗಿಲಾ ಹಾಕಿಕೊಂಡ್ರಾತು !"

" ಅದ್ಯಾನ ಮನೀನs ನನ್ನೊಡ್ಯಾ? ಗುಡ್ಲು. ಬೇಕಾದ ಕಡಿಂದನೂ ಒಳಗೆ ಸೇರ್ತಾವ.... "

" ಮನೆಯಲ್ಲವೊ ? "

" ಅಲ್ಲ; ರಾಯರs ಗುಡ್ಲು '' ಎಂದು ಸ್ವಲ್ಪ ಸ್ತಬ್ಧನಿದ್ದ ಮತ್ತೆ ಹೇಳತೊಡಗಿದ.

" ಹಿಂದ್ಕ, ಮನೀನೂ ಇತ್ತು ಅಲ್ಲೇ ಭಾವೀ ಹತ್ರಾನs. ಮನೀ ಅಂದ್ರ ಕೆಸ್ರು ಕಲ್ಸಿ ಕಟ್ಟಿದ್ದಲ್ಲ. ಸುಮ್ನ ಸವಡು ಸಿಕ್ಕಾಗ ಸಾಕು ಕಲ್ಲೇರಿಸಿ, ಮ್ಯಾಲೆ ದಂಟು-ಗಳಾ ಹಾಕಿದ್ದಿವಿ; ನಾಕು ದಿನಾ ಹಂದೀ ಕಾಟ ತಪ್ಪಿತ್ತೂ ಅನ್ರಿ. ಆದರ....'' ಎಂದು ಸುಮ್ಮನಾದ.

" ಆದರೇನು ?"

" ಕೇಳಬ್ಯಾಡ್ರಿ ದ್ಯಾವ್ರೆ . . " ಈರನ ದನಿಯಲ್ಲಿ ದುಃಖ ತುಂಬಿತ್ತು. ನಾನು ಯಾಕೆ ಕೇಳಿದೆನೋ ಎಂದೆನ್ನಿಸಿತಾದರೂ ಕುತೂಹಲ ಕೆರಳಿ " ಯಾಕೆ?" ಎಂದು ಮೈಮರೆತವನಾಗಿಯೆ ಮತ್ತೆ ಅಂದೆ.

ಈರ ಸ್ವಲ್ಪ ಹೊತ್ತು ಸುಮ್ಮನಿದ್ದ. ಉಗುಳಿದ, ಕಣ್ಣನ್ನೂ ಒರಿಸಿ ಕೊಂಡನೇನೋ! ಕಳವಳ ಬೆರೆತ ಕಂಠದಿಂದ ಹೇಳಹತ್ತಿದ:

“ ಅದೊಂದು ಕಾಳರಾತ್ರಿ—ಆಗ.... ನರಿಯ ಕಾಟ . . ಭಾಳ. ಕಬ್ಬಿನ ಸುತ್ತ ತಿರುಗಿ ಬರಬೇಕಂತ ಹೋದ್ದಿರಿ ! ನಾಲ್ಕು ಮಾರು... ಹೋಗಿದ್ವಿ ಇನ್ನೂ ! ಕಲ್ಲುರುಳಿದ ಸಪ್ಪಳಾತು. ಓಡಿ ಬಂದು .... ಬಾಗಿಲ ಈಡು ತೆಗಿತಿದ್ವಿ...! ಒಳಗಿಂದ ಕಾಡಹಂದಿ.... ಬಂದು ಹಾಯ್ತು. ಅಯ್ಯೋ... ಅಂತ ಅಲ್ಲೇ ನೆಲಕ್ಕ ಓರಗ್ದೆ....! ಸೊಲ್ಪ ತಡ್ದು ಒಳ್ಗ ಹೋಗಿ, ದೀಪಾ ಹೊತ್ಸಿದೆ.... ಹೋಗಿದ್ದು ದ್ಯಾವ್ರೆ !”

“ ಏನೋ ಹಾಗಂದ್ರೆ?”

“ ಹೋಗಿದ್ಲು . . ದ್ಯಾವ್ರೆ . . ನೀಲಿ.... ತೀರ್ಕೊಂಡು ಹೋಗಿದ್ಲು....!

“ ಏನು ಹಂದಿ ಕೊಂದಿತ್ತೋ? ”

“ ಇಲ್ಲ ದ್ಯಾವ್ರೂ, ಮ್ಯಾಮ್ಯಾಲ ಕಲ್ಲುರುಳಿ . .”

“ ಈರ ಮೌನದಿಂದ ನಡೆಯಹತ್ತಿದ. ಅವನ ಕಣ್ಣೆದುರಿಗೆ ಅಂದಿನ ಚಿತ್ರ ಕಟ್ಟಿರಬೇಕು. ನನ್ನ ಮನಸ್ಸೂ ಬರಿಯದಾಗಿತ್ತು. ಮಾತಾಡುವು ದಾಗಲಿಲ್ಲ. ಹಾಗೆಯೆ ವಿಚಾರವೊಂದು ತಲೆಯಲ್ಲಿ ಸುಳಿಯಿತು: ‘ ಮನುಷ್ಯ ಬಡವನಾಗಿರಬಹುದು. ಉಪವಾಸವೂ ಇರಬಹುದು. ಆದರೆ ಅದನ್ನೆಲ್ಲ ಮರೆಯಿಸುವಂತಹ ಮಡದಿಯ ಮುಖವೊಂದೆದುರಿಗೆ ಇದ್ದರೆ . . ಎಲ್ಲ ಉಪದ್ರವಗಳನ್ನೂ ನಗೆಮೊಗದಿಂದ ಎದುರಿಸಬಹುದಲ್ಲ!....

“ ಈರಪ್ಪಾ ನನಗ ಇದಾವದೂ ಗೊತ್ತಿಲ್ಲಲ್ಲಾ !

“ ನೀವು ಇನ್ನೂ ಈ ಊರಿಗೆ ಬಂದಿದ್ದಿಲ್ಲ ದ್ಯಾವ್ರೂ....! ಮಾತ ನಾಡುತ್ತಿರುವಂತೆಯೇ ಮುಂದೆ ಒಂದು ಗುಡಿಸಲನ್ನು ಕಂಡೆ. ಹಳೆಯ ಗುಡಿಸಲದು. ಬಿರಿಬಿರಿ ಬಿಸಿಲಲ್ಲಿ ನಿಂತಿದೆ. ‘ ನೀರು ನೆಳಲುಗಳಿದ್ದಲ್ಲಿ ಗುಡಿಸಲನ್ನು ಕಟ್ಟಬೇಕೆಂದರೆ ಅಲ್ಲಿ ಅಡವಿಯ ಪಶುಗಳ ಕಾಟ: ನಿರ್ಧ ನರಿಗೆ ನಿಸರ್ಗವೂ ಮುನಿಯಬೇಕೇ? ಎಂದು ಮನದಲ್ಲಿ ಮರುಗಿದೆ.

ಈರ ಸ್ವಲ್ಪ ಮುಂದಕ್ಕೆ ಹೋಗಿ ಅಂಗಳ ಕಸಗುಡಿಸಿದ. ನಾನೂ ಹೋದೆ. “ ಕೂಡ್ರಿ ರಾಯರs ಹೊಲ್ದಾಗ ಭೂಮಿತಾಯೇ ಹಾಸ್ಗಿ”

ಎಂದ ಸಂಕೋಚದಿಂದ. ಮಗುಗಳಿಗೆಯಲ್ಲಿ ಹಾಲು ತಂದುಕೊಟ್ಟ ಕುಡಿಯಲೆಂದು. ಹಾಗೇ ಕೇಳಿದೆ: 'ಕಬ್ಬ ಒಣಗತಾ ಇದೆಯಲ್ಲಾ ?'

"ಇದs ರಾಯರs! ಬಾಂವಿಗೆ ನೀರs ಇಲ್ಲ ಕೊಳಚಿ ತುಂಬಿಕೊಂಡೈತಿ ಎಂದೋ ಹಿರೇರ ಕಾಲ್ಕ ತಗ್ಡಾರು ತೆಗ್ಸಿ ಕೊಡ್ರೀ ಅಂದ್ರ ಮುಂದ ಮುಂದಕ್ಕ ಹಾಕ್ತ ಬಂದ್ರು. ನಾನs ನೋಡಲಾರದಕ್ಕ ದನಾ ಕಾಯುವರ್ನ ಕರ್ದು— ಗೌಡ್ನ ಹತ್ರ ಕೇಳಿ ನಾಕು ಕಾಸ ತರ್ತೇನಿ, ಚುನಮುರೀ ತಿನ್ನೋಣ ಅಂತ ಹೇಳಿ, ಕೊಳಚೀ ತಗೀಲಿಕ್ಕೆ ಕರಕೊಂಡು ಬಂದೆ. ಇನ್ನೊಂದು ದಿನಾ ತೆಗದ್ರ ತೀರ್ತೈ. ನಿನ್ನೆ ಸಂತಿ; ಊರಾಗ ಹ್ವಾದೆ. ಹಾಂಗs ಗೌಡನ ಕಡೆ 'ಹಾದು, ನಾಲ್ಕು ಹುಡುಗರ್ನ ಕರಕೊಂಡ ಕೊಳಚೀ ತಗೆದ್ನೈ; ಅವರಿಗೆ ಚುನಮುರಿ ತರ್ತೇನಂತ ಹೇಳ್ಡಿನಿ. 'ನಾಲ್ಕು ದುಡ್ಡು ಕೊಡ್ತೀರಿ?' ಅಂತಾ ಕೇಳ್ಡಿನಿ. 'ಕೇಳದ ಯಾಕ ತಗ್ಡು? ನಡಿ ತ್ವಾಟಾ ಬಿಟ್ಟ್ನ, ಅಂತಾ ಬಾಯಿಬಿಟ್ಟರು. ಯಾಕೋ ಸಿಟ್ಟಿಗೆ ಬಂದರು:— ಅಂದ್ಕೊಂಡು ಸಂಜೀತಂಕಾ ಕೂತೆ; ಸಂಜೀನಾಗೂ ಹಾಂಗs ಅಂದ್ರು. ಆಗ ನೀವೂ ಬಂದಿದ್ರೆಲಾ.!"

ಈರನ ತೋಟಕ್ಕ ಹೋಗಿ ಬಂದಾಗಿನಿಂದಲೂ ಏನು ಮಾಡುವುದಕ್ಕೂ ಬೇಸರು. ಕಾಲಕಳೆಯುವುದೇ ಕಷ್ಟವೆನಿಸಿತು. ಹೇಗೋ ಹೊತ್ತು ಹಾಕುತ್ತಿದ್ದೆ. ಇಂದೇನೋ ಅತ್ತಿತ್ತ ಸ್ವಲ್ಪ ಅಡ್ಡಾಡಿ ದೀಪ ಹೊತ್ತಿಸುವ ಹೊತ್ತಿಗೇನೇ ಗೌಡರ ಮನೆಗೆ ಹೋದೆ. ಅವರ ತಯ್ಯಾತಿ ಹಳಬ— 'ಆ ದಿವ್ಸ ಮುಂಜೇಲಿ ಕರಿಬಸ್ವ, ತೋಟಾ ಮಾಡಿಕೊಂಡ ಇರತೇನಂತ ನಿಮ್ಮ ಹತ್ರ ಹೇಳಿ ಹೋಗಲಿಲ್ಲs ಅಂದ ಸಂಜೀನಾಗs ಈರಗ ಹೇಳಿ ಕಳ್ಸಿದೆ ನೀವು ಹೇಳ್ದಾಂಗ. ಇಂದ ಸಂಜೀನಾಗಂದ್ರ ಅತ್ತ ಹೋಗಿದ್ನಿ. ಕಬ್ಬು ಒಣಗಿದ್ದು ನೋಡಿ ಸಿಟ್ಟು ಬೆಂಕೀ ಆದ್ನಿ ಅನ್ರಿ. ಎತ್ತು-ಕೋಣ, ಹಗ್ಗ-ಹಂಗಡ ಅಲ್ಲಲ್ಲೇ ಬಿದ್ದಿದ್ದವು. ಎಲ್ಲಾರೂ ಗುಡ್ಲ ಕಡೇನ ಇದಾರೇನೋ ಸೂ.. ಮಕ್ಕಳಂತ ಕೂಗಿದೆ. ಯಾರೂ ಬರಲಿಲ್ಲ. ಗುಡ್ಲಿನ ಕಡೇನs ಹ್ವಾದೆ; ಮನ್ಯಾರ ಸುಳುವಿರಲಿಲ್ಲ. ಗುಡ್ಲ ಹೊಕ್ಕು ನೋಡ್ದೆ. ಗಡಿಗಿ ಮಡಕಿ ಹಾಂಗs ಇದ್ದೂ! ಸುತ್ತಲೂ ಸುತ್ತಾಡಿ ನೋಡಿದೆ. ಒಂದು ಪಿಳ್ಳೆನೂ ನೋಡಲಿಕ್ಕೆ ಸಿಗಲಿಲ್ಲ" ಎಂದು ಏನೇನೋ ಹೇಳ್ತಿದ್ದ.

ಕೇಳುತ್ತಿದ್ದಂತೆಯೇ ಕಳವಳವಾಯಿತು ನನಗೆ. ದೇಹದೊಳಗಿನ ಶಕ್ತಿ ಸೇದಿ ಹೋದಂತಾಯ್ತು. ಅಲ್ಲೇ ಇರುವ ಕಂಬಕ್ಕೆ ಆತುಕೊಂಡು ನಿಂತೆ- ಹೊರಗಿನ ಪ್ರಪಂಚವು ಶೂನ್ಯವಾದಂತಿದ್ದ. ಹೃದಯಾಂತರಾಳ ದಲ್ಲಿ 'ಈರ ತೋಟ ಬಿಟ್ಟು ಯಾಕೆ ಹೋದ?' ಎಂಬುದೆಲ್ಲಾ ಗಾಢತರ ವಾಗಿ ಚಿತ್ರಿತವಾಗಿತ್ತು. ಅವನ ಬಡತನದ ಬವಣೆಯನ್ನು ಅರಿತುಕೊಳ್ಳಲು ಹವಣಿಸಿದೆ. ನಾನು ಅವನಿಗೆ ಸ್ವಲ್ಪವಾದರೂ ಸಹಾಯ ನೀಡಬಹು ದೆಂದು ಬಗೆದೆ. ಅವನು ಹೀಗೆ ಒಮ್ಮೆಲೇ ಹೋದಾನೆಂದು ಕನಸಿ ನಲ್ಲಿಯೂ ಭಾವಿಸಿರಲಿಲ್ಲ ನಾನು. ಮತ್ತೊಮ್ಮೆ ಬರುವೆನೆಂದಿದ್ದನಲ್ಲ! ಯಾತಕ್ಕೆ ಬರುವುದೆಂದೆಣಿಸಿತೇನೋ; ಎನಿಸಿರಲೂ ಬಹುದು! ಗೌಡರ ನೆರೆಯಲ್ಲಿದ್ದವರ ಉಪಕಾರವೂ ಬೇಡವೆಂದೆನಿಸಿತೇನೋ! ಹೌದು; ದುಡ್ಡುಳ್ಳವರ ಉಪಕಾರವೇ ಅಂತಹದು! ಅವನದು ನಂಬುಗೆಯ ಸ್ವಭಾವ, ಅವನ ಬಗೆಗೆ ಗೌಡರು ವ್ಯತಿರಿಕ್ತವಾಗಿ ನಡೆದುಕೊಂಡರು. ಆದರಿಂದ ಹೀಗೆ ಬಿಟ್ಟು ಹೋದ.... ಅದೆಲ್ಲಿ?

ಈ ಸಂಗತಿಯು ಮನವನ್ನು ನೆನೆಯಿಸಲು ನೀರನ್ನು ಹನಿಸುತ್ತ ಲಿತ್ತು. ಹೆಚ್ಚಾದ ನೀರು ಬಸಿದು ಹೊರಕ್ಕೆ ಬರುವುದೇನೋ ಎನ್ನುವಂತೆ ನಯನಗಳಿಂದ ನೀರು ಒಸರುತ್ತಿದ್ದಿತು. ಮೆಲ್ಲನೆ ಕಣ್ಣನ್ನು ಒರಸಿಕೊಂಡು ನೋಡಿದೆ. ಅದಾವಾಗಲೋ ಮನೆಯ ಮುಂದೆ ಬಂದಿದ್ದೆ. ಬಾಗಿಲಲ್ಲಿ ಲಲಿತೆ ನಗುಮೊಗದಿಂದ ನಿಂತಿದ್ದಳು. ಅವಳಾ ನಗೆ ನನ್ನ ಮನದ ಉದ್ವಿಗ್ನತೆಗೆ ತೆರೆಯಾಗಿ ಪರಿಣಮಿಸಿತು. ಮತ್ತೊಮ್ಮೆ ಈರನ ಬದುಕಿನ ದುರಂತ ನೆನಪಾದಾಗ, ನನ್ನ ಮನುಷ್ಯತ್ವಕ್ಕೆ ನಾನೇ ನಕ್ಕುಬಿಟ್ಟೆ.



# ಕಲಿತ ಕಳ್ಳ



" ಕಿಟ್ಟ್ಯಾ.......! ಚಳಿಯೊ.......! ಹೊಟ್ಟಿಯಾಗ್ಲಿ ನಡುಕ.......! ಅಯ್ಯೋ ಸಾಯ್ತಿನೊ ....... ಕಿಟ್ಯಾ .... ಅಯ್ಯೋ.... ಅಯ್ಯೋ.... ಹ.... ಯ್ಯೋ.... ಎಂಥಾ... ವೇಳೆ ತಂದೆಪ್ಪಾ ಭಗವಂತಾ!.... ಅಯ್ಯೋ... ಚಳಿ! ಚಳಿ!... ಏನಾದರೂ ಹೊಚ್ಚ್ಯಾ....ಕಿಟ್ಯಾ! ಕಿಟ್ಯಾ ನಿನ್ನ ಮಕ್ಕಳು ಮರೀ....ಎಲ್ಲಾ ನೋಡಿದೆ........ ಆದರೆ ಇದು ನೋಡೋದು ಬ್ಯಾಡಪ್ಪಾ!.... ದೇವರು ಲಗೂನೇ ಕಣ್ಣು ಮುಚ್ಚಲಿನ್ನು !....... ಎಲ್ಲಿ ಹೋದ್ಯೋ ........ ಕಿಟ್ಯಾ..........? "

' ಎಲ್ಲಿಲ್ಲವ್ವಾ. . ಇಲ್ಲೇ ಇದ್ದೀನಿ! ಹೊಚ್ಚಲಿಕ್ಕೆ ಏನಾದ್ರೂ ಅದs. . ಏನು ನೋಡಿದೆ. . ನೀನು ಹಾಗೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳ ಬೇಡವವ್ವಾ. . . . ದಿನಮಾನ ಬಂದ್ಹಾಂಗ ಹೋಗಲಿಕ್ಕೇ ಬೇಕು ! ಈಗಾದರೂ ಸಮಾಧಾನದಿಂದ ನಾಲ್ಕು ದಿನಾ ಹೋಗಲಿ! '

' ಎಂಥಾ .... ಸಮಾಧಾನ ! ಸುಡಗಾಡಿನಾಗಿನ ....ಸಮಾಧಾನ ! ಸುಟ್ಟು ಹೋಗಲಪ್ಪಾ ಇಂಥಾ ಸಮಾಧಾನ !..........ಅಯ್ಯೋ.... ಬಾಳಾ....ಕಿಟ್ಯಾ ! ....ಸಾಯ್ತಿನೋ........ ಇನ್ನ !... ....ನಿನಗ ಕಲಿಸಿ.... ಏನು ದಂಡೆಗೆ ಹಚ್ಚಿದ್ಹಾಂಗಾತು.......ನಡು ಹೊಳ್ಯಾಗ....ಹರಿಗೋಲಿನ ಹುಟ್ಟು.......ಮುರಿದ್ಹಾಂಗ ಆತಲ್ಲ.......ನಿನ್ನ ಜನ್ಮಾ!... .. '

ಕಿಟ್ಟುವಿನ ವಿಷಣ್ಣವಾದ ಮೊಗದಿಂದ ಹೊರಟ ಬಿಸಿಯುಸಿರೊಂದು ಮನೆಯೊಳಗಿನ ಹವೆಯನ್ನೆಲ್ಲ ಬೆಚ್ಚಗೆ ಮಾಡಿತು. ಅದರಿಂದ ಮುದು- ಕಿಯ ಚಳಿಯೂ ಕೊಂಚ ಕಡಿಮೆಯಾಯಿತೇನೋ ! ಸ್ವಲ್ಪ ಶಾಂತ ಳಾಗಿ, ' ಶಾಂತೀದು ಇನ್ನೂ ಒಳಗಿನ ಕೆಲಸ..........ಆಗಲಿಲ್ಲs ? ನಿನಗ ಅಂಗಡಿಗೆ ಹೋಗಲಿಕ್ಕೆ ಹೊತ್ತಾಯ್ತು... ' ಎಂದು ಮತ್ತೊಂದು ಮಗ್ಗುಲಿಗೆ ಹೊರಳಲು ಯತ್ನಿಸಿದಳು.

೨

ಸ್ಥಾವರ ಆಸ್ತಿ-ಪಾಸ್ತಿಗಳಿಲ್ಲದೆ ಕೇವಲ ಸಣ್ಣ ಸಂಬಳದಮೇಲೆ ಸಾಗುವ ಸಂಸಾರವು, ಸದ್ಯ ಸುಸ್ಥಿತಿಯಲ್ಲಿದ್ದಂತೆ ಕಂಡರೂ, ಅದು ತಳ ಹದಿ ಹಾಕದೆ ಕಟ್ಟಿದ ಕಟ್ಟಡದಂತೆಯೆ. ಈ ಮಾತಿನ ಅರಿವು ಶ್ರೀನಿವಾಸರಾಯರಿಗೆ ಇರಲಿಲ್ಲವೆಂತಲ್ಲ, ಇತ್ತು. ಅಂತೆಯೆ ಅವರು ತಾಲ್ಲೂಕು ಕಚೇರಿಯೊಳಗಿನ ಸಣ್ಣ ಗುಮಾಸ್ತರಾಗಿದ್ದರೂ ಮೂರು ಸಾವಿರ ರೂಪಾಯಿಗಳ ಜೀವವಿಮೆಯೊಂದನ್ನು ಮಾಡಿಸಿದ್ದರು—ಮುಪ್ಪಿನ ಕಾಲಕ್ಕೆ ನೆರವಾದೀತೆಂದು. ಇದೂ ಅಲ್ಲದೆ, ಸಂಬಳದಲ್ಲಿ ಮನೆತನ ಸಾಗಿಸಿ ಹಿರಿಯಮಗನನ್ನು-ಕಿಟ್ಟೊ ಆತನ ಹೆಸರು—ಬಿ. ಎ. ವರೆಗೆ ಅಭ್ಯಾಸ ಮಾಡಿಸಿದ್ದರು; ಅದರಲ್ಲೂ ವಿಶೇಷವೆಂದರೆ ಇಷ್ಟರಲ್ಲಿಯೆ ಕಿಟ್ಟುವಿನ ಮದುವೆಯನ್ನೂ ಮಾಡಿಬಿಟ್ಟಿದ್ದರು. ಇನ್ನೇನು, 'ಐದಾರು ತಿಂಗಳಲ್ಲಿ ಸೊಸೆ ಮನೆಗೆ ಬರುವಳು, ಅಷ್ಟರಲ್ಲಿಯೆ ಕಿಟ್ಟುವಿನ ಪರೀಕ್ಷೆಯೂ ಆಗುವುದು, ಮತ್ತೇನು ? ಪ್ರಾಂತಸಾಹೇಬರ ಗುರುತೂ ಇದೆ, ಸ್ವಲ್ಪ ಹೇಳಿಕೊಂಡು ಕಿಟ್ಟುವಿಗೆ ಎಲ್ಲಿಯಾದರೂ ಒಂದು ಕೆಲಸ ಕೊಡಿಸಿದಿರೆ ತೀರಿತು. ಅವರ ಭಾರವಂತೂ ಬೇರೆ ಕಡೆಗೆ ಹೋಗುವುದು. ನನ್ನ ಸಂಬಳದಲ್ಲಿ ಸಣ್ಣ ಹುಡುಗನ ಶಿಕ್ಷಣ—ಮನೆಯ ವೆಚ್ಚಗಳು ಸಾಗುವವು....' ಇವೇ ಮೊದಲಾದ ಕನಸುಗಳನ್ನು ಕಾಣುತ್ತ ಶ್ರೀನಿವಾಸರಾಯರು ಸುಖದಲ್ಲಿದ್ದರು. ಆದರೆ ವಿಧವೆಯಾದ ಮಗಳು ಮುಂದೆ ಹಾಯ್ದು ಹೋದಾಗ, ಅವರ ಹೃದಯಕ್ಕೆ ಸಾವಿರ ಚೇಳು ಕಡಿದಷ್ಟು ನೋವಾಗುವುದು. ಆದರೂ 'ಎಲ್ಲರಿಗೂ ಎಲ್ಲ ವಿಷಯಗಳಲ್ಲಿಯೂ ಎಲ್ಲಿ ಸರಿಯಾಗಿರುತ್ತದೆ ! ಯಾವುದಾದರೊಂದು ಕೊರತೆ ಇದ್ದೇ ಇರುವುದಲ್ಲ !' ಎಂದುಕೊಂಡು ಮನಸ್ಸಿಗೆ— ಏನೋ ಸ್ವಲ್ಪ— ಸಮಾಧಾನಮಾಡಿಕೊಳ್ಳುತ್ತಿದ್ದರು.

ಶ್ರೀನಿವಾಸರಾಯರ ಸಂಸಾರ ಕಟ್ಟಡವು, ಯಾವುದೊ ಒಂದು ಮೂಲೆಯಲ್ಲಿ ಸ್ವಲ್ಪ ಕೆಳಗಿಳಿದದ್ದು ಎಲ್ಲವೂ ಒಮ್ಮೆಲೆ ಮುರಿದೇ ಬಿತ್ತು; ರಾಯರು ಅಕಸ್ಮಾತ್ ತೀರಿಕೊಂಡುದರಿಂದ, ಕಿಟ್ಟುವಿನ ಓದು ಅಷ್ಟಕ್ಕೆಯೆ ನಿಂತಿತು, ಮನೆಗೆ ಬಂದ. 'ಮಾವ ಸತ್ತ, ಮಾತನಾಡಿಸಬೇಕು'

ಎಂದು ಶಾಂತೆಯ ತಂದೆ ಅವಳನ್ನು ಕರೆದುಕೊಂಡು ಬಂದು, ನಾಲ್ಕ ದಿನ ನಿಂತು, ಅವಳನ್ನು ಅಲ್ಲಿಯೆ ಬಿಟ್ಟುಹೋದ. ಅಂತೂ ಕಿಟ್ಟುವಿಗೆ ತಾಯಿ, ಅಕ್ಕ, ತಮ್ಮ ಹಾಗೂ ಈಗ ಮನೆಗೆ ಬಂದ ಹೆಂಡತಿ ಇಷ್ಟು ಜನರ ಭಾರ ಹೊರಬೇಕಾಯಿತು. ಹಿರಿಯರಿಂದ ಬಂದ ಆಸ್ತಿಯೆಂದರೆ ದೂರದ ಹಳ್ಳಿಯಲ್ಲೊಂದು ಮನೆ, ಬರಬೇಕಾದ ವಿಮೆಯ ಹಣ. ಇಷ್ಟೇ ! ವಿಮೆಯ ವಿಚಾರ ಮಾಡಲಾಯಿತು. ಪರದೇಶದ ಕಂಪನಿ. ಯುದ್ಧದ ವಿಷಮವಾತಾವರಣದ ಮೂಲಕ ಅದರ ಆಫೀಸು ಮುಚ್ಚಲ್ಪಟ್ಟಿದ್ದಿತಂತೆ. ಅದರ ಪ್ರಧಾನ ಕಾರ್ಯಾಲಯ ಅಮೇರಿಕೆಯಲ್ಲಿ; ಆದುದರಿಂದ ಅತ್ತ ಕೆಲಸ ನಡೆಯಿಸಿ, ವಾರಸ್‌ದಾರರ ನಿಶ್ಚಯವಾದ ಮೇಲೆ ಆ ಹಣ ಕೈಗೆ ಸಿಕ್ಕುವುದು. ಅದರಿಂದ ಅದೂ ಸದ್ಯಕ್ಕೆ ಕನ್ನಡಿಯೊಳಗಿನ ಗಂಟಿ.

ಹೀಗಿತ್ತು, ಕಿಟ್ಟುವಿನ ಮನೆತನಕ್ಕೆ ಹಿರಿಯರಿಂದ ಬಂದ ಆಸ್ತಿಯ ಆಧಾರ. ಎಂದ ಮೇಲೆ ಅವನ ಶಿಕ್ಷಣದ ಮುಂದೆ ಹೇಗೆ ಸಾಗಬೇಕು ? ಅದರಿಂದ ಆತನು ಕಲಿಯುವುದನ್ನು ಬಿಟ್ಟು ಮನೆತನ ಸಾಗಿಸುವ ಯೋಚನೆ ಮಾಡಬೇಕಾಯಿತು. ತಾಯಿಯ ಹತ್ತಿರ ಇದ್ದ ಅಲ್ಪಸ್ವಲ್ಪ ಬಂಗಾರದ ಒಡವೆಗಳನ್ನು ಮಾರಿ, ತಂದೆಯ ಉತ್ತರಕರ್ಮ ತೀರಿಸಿ ತಿಲಾಂಜಲಿ ಕೊಟ್ಟನು. ಎಲ್ಲವನ್ನೂ ಬಿಡಲು ಬಂದೀತು, ಆದರೆ ಈ ಧರ್ಮದ ಕಟ್ಟು-ಳೆಗಳನ್ನು ಮೀರುವುದು ಸಾಧ್ಯವೆ ? ಧಾರ್ಮಿಕ ವಿಧಿ—ವಿಧಾನಗಳನ್ನಷ್ಟು ತೀರಿಸಿದ ಮೇಲೆ, ಉಳಿದ ನಾಲ್ಕು ಕಾಸುಗಳಿಂದ ಅಂತೂ ಇಂತೂ ನಾಲ್ಕು ದಿನ ಹೊಟ್ಟೆಗಿಷ್ಟು ಹಿಟ್ಟೂ ನೀರೂ ಆಯಿತು.

ಮುಂದೆ ಮನೆತನ ಸಾಗಿಸಲು ಕಿಟ್ಟು ಕೆಲಸ ಹುಡುಕಬೇಕಾ-ಯಿತು. ಎಲ್ಲ ಕಡೆಗೂ ಕೆಲಸಕ್ಕೆ ಅರ್ಜಿ ಹಾಕಿದ. ಇಂದಿನ ಈ ನಿರುದ್ಯೋಗ—ಯುಗದಲ್ಲಿ ಕೇವಲ ಅರ್ಜಿಯಿಂದಲೆ ಕೆಲಸ ಬೇಗನೆ ಹೇಗೆ ಸಿಕ್ಕಬೇಕು ? ಕೆಲಸ ಸಿಕ್ಕುವವರೆಗೆ ಎಲ್ಲಿಯಾದರೂ ಅಂಗಡಿಯಲ್ಲಿ ಲೆಕ್ಕ ಬರೆದು, ಬಂದದ್ದರಲ್ಲಿಯೆ ಸಂಸಾರ ಸಾಗಿಸಬೇಕೆಂದು, ಲೆಕ್ಕ ಬರೆಯುವ ಕೆಲಸ ಹಿಡಿಯಲು ಅಂಗಡಿಗೆ ಹೋದ. ಅಂಗಡಿಕಾರನು ' ಹೊಟ್ಟೆಗೆ ಕಾಳು—ಕಡಿಗಳನ್ನು ಒಯ್ಯುವಂತಿದ್ದರೆ ನಾಳೆಯಿಂದ ಬರ

ಯಲಿಕ್ಕೆ ಬರುತ್ತೀರು, ಇಲ್ಲದಿದ್ದರೆ ಬೇಡ! ಈಗೇನು ಬರೆಯುವವರಿಗೆ ಕಡಿಮೆ? ದಿನಾ ಕೊಳಿವಿ ಅಕ್ಕಿಕೊಟ್ಟರೆ, ಬಂದು ಬರೆದು ಹೋಗ್ತಾನ, ಆ ಪೇನ್ಶನಲ್ ಮಾಸ್ತರು!' ಎಂದು ಹೇಳಿಬಿಟ್ಟನು 'ಇರಲಿ, ಇದಕ್ಕೂ ಹೆಚ್ಚು ಎಲ್ಲಿ ಸಿಗತ್ತದ? ಒಂದುವೇಳೆ ಎರಡನೆಯ ಕಡೆಗೆ ಸಿಕ್ಕರೂ ಇದನ್ನೇನು ನಾನು ಕಾಯಂ ಮಾಡಬೇಕಿಲ್ಲ. ನಾಲ್ಕುದಿನ ಕೆಲಸ ಸಿಕ್ಕುವ ವರೆಗೆ ಮಾತ್ರ ಮಾಡುವುದು!' ಎಂದು ಹೆಚ್ಚಗೆ ವಿಚಾರಿಸದೆ ಕಿಟ್ಟುವೂ ಅದಕ್ಕೆ ಒಪ್ಪಿದ. ಅಂದಿನಿಂದ ಕಿಟ್ಟುವಿಗೆ ನಾಲ್ಕಾರು ಅಂಗಡಿಗಳಲ್ಲಿ ಲೆಕ್ಕ ಬರೆಯುಲು ಕೆಲಸ ಸಿಕ್ಕಿತು; ಆದರಿಂದ ಅರೆಹೊಟ್ಟೆಯ ಜೀವನವು ಸಾಗಲಾರಂಭಿಸಿತು.

ಸರಕಾರಿ ಕೆಲಸ ಸಿಕ್ಕುವವರೆಗೆ ಅಂಗಡಿಯ ಲೆಕ್ಕ ಬರೆಯಬೇಕೆಂದು ಕಿಟ್ಟು ನಿಶ್ಚಯಿಸಿ ಬರೆಯುವುದನ್ನು ಹಿಡಿದ. ಆದರೆ ಇನ್ನೂ ಬೇರೆ ಕಡೆಗೆ ಕೆಲಸ ಸಿಕ್ಕಲಿಲ್ಲ. ಸಿಕ್ಕುವ ಸಂಬಳ—ಅಲ್ಲ ಕಾಳು-ಕಡಿ ಹೆಚ್ಚಾಗಲಿಲ್ಲ. ಸಂಬಳ ಹೆಚ್ಚಾಗದಿದ್ದರೂ ಸಂಸಾರ ದಿನ—ದಿನಕ್ಕೆ ದೊಡ್ಡದಾಗುತ್ತಿದ್ದಿತು. ಬಡತನಕ್ಕೆ ಸಂತತಿ ಬೇಡ—ಬೇಡವೆಂದರೂ ಬಿಡುವುದಿಲ್ಲವಂತೆ. ಶಾಂತೆ ಈಗ ಎರಡು ಮಕ್ಕಳ ತಾಯಿ; ಮೇಲೆ ಮತ್ತೊಂದು ಬಸಿರು ಬೇರೆ. ತಾಯಿ ಈಗೊಂದು ವರ್ಷದಿಂದಲೂ ಕ್ಷಯದಿಂದ ಹಾಸಿಗೆ ಹಿಡಿದಿರುವಳು. ಅಕ್ಕ ಸ್ವಲ್ಪ ವಿಶಾಲ ಮನಸ್ಸಿನವಳು; ಅದರಲ್ಲೂ ಸುಧಾರಕ ಕಿಟ್ಟುವಿನ ಸಹವಾಸ ಬೇರೆ. ತಾಯಿ ಕಟ್ಟಾ ಸನಾತನಿಯಾದರೂ, ಮಗಳು ನರ್ಸ್ ಕೆಲಸ ಮಾಡುವೆನೆನ್ನಲು ಅನಿವಾರ್ಯವಾಗಿ ಒಪ್ಪಿಗೆ ಕೊಡಬೇಕಾಯಿತು. ಅದರಿಂದ ಅಕ್ಕನ ಹೊರೆಯೊಂದು ಕಿಟ್ಟುವಿಗೆ ಕಡಿಮೆಯಾಗಿತ್ತು. ಇಷ್ಟೇ ಅಲ್ಲ, ಅವಳೇ ತನ್ನ ಹೊಟ್ಟೆ-ಬಟ್ಟೆ ಸಾಗಿಸಿಕೊಂಡು ತಿಂಗಳೊಂದಕ್ಕೆ ಕಿಟ್ಟುವಿಗೆ ನಾಲ್ಕು ರೂಪಾಯಿ ಕಳುಹುತ್ತಿದ್ದಳು. ಆದರೂ ಕಿಟ್ಟುವಿನ ಸಂಸಾರವು ಸುಖಮಯವಾಗಿ-ಬೇಡ-ಸುಸೂತ್ರವಾಗಿ ಸಾಗುವಂತೆಯೂ ಆಗಲಿಲ್ಲ.

೩

ಕಿಟ್ಟು ಒಂದು ಅಂಗಡಿಯ ಲೆಕ್ಕ ಬರೆದು ಮತ್ತೊಂದು ಅಂಗಡಿಗೆ ಹೋಗಲೆಂದು ಹೊರಟ. ಹೊರಗೆ ಜಿಟಿಜಿಟಿ ಮಳೆ. ಆಕಾಶವು ತಿಳಿಯಾದ

ಕಪ್ಪು ಮೋಡಗಳಿಂದ ಮುಚ್ಚಿದ್ದಿತು. ದಾರಿಯಲ್ಲಿ ಒಬ್ಬಿಬ್ಬರು ಕೊಡೆ ಹಿಡಿದು ಹೊರಟಿದ್ದರು. ಮಳೆ ಬೇಗ ನಿಲ್ಲುವ ಲಕ್ಷಣ ತೋರುತ್ತಿರಲಿಲ್ಲ. ಕಿಟ್ಟು ತಲೆಯ ಮೇಲಿನ ಟೊಪ್ಪಿಗೆ ತೆಗೆದು ಬಗಲಲ್ಲಿ ಹಿಡಿದು, ಸ್ವಲ್ಪ ಬೇಗ ನಡೆದ. ಈಗ ಅವನು ಹೋಗಬೇಕಾದದ್ದು ಜವಳಿಯ ಅಂಗಡಿಗೆ. ಅದು ಸ್ವಲ್ಪ ದೂರವಿತ್ತು. ಅಲ್ಲಿ ಹೋಗುವುದರೊಳಗೆ ಟೊಪ್ಪಿಗೆ ತೊಯ್ಯು ವುದು; ತಲೆ ತೊಯ್ದರೂ ಒರಸಲಿಕ್ಕೆ ಬಂದೀತೆಂದು ಕಿಟ್ಟುವಿನ ವಿಚಾರ. ಕೊಡೆ ಹಿಡಿದುಕೊಂಡು ಹೊರಟ ದಾರಿಕಾರನಿಗೆ ಇದೊಂದು ಮೋಜೆನಿ ಸಿತೇನೊ; ಅವನ ಮುಖದಲ್ಲಿ ಕಿರುನಗೆಯೊಂದು ಮಿಂಚಿತು.

ಹೋಗು-ಹೋಗುತ್ತ ಕಿಟ್ಟುವಿಗೆ ಹಿಂದಿನ ದಿನಗಳೆಲ್ಲ ನೆನಪಾಗ ತೊಡಗಿದುವು. ನಾಲ್ಕೈದು ವರ್ಷಗಳ ಹಿಂದೆ ತಾನು ಕಾಲೇಜಿನಲ್ಲಿದ್ದುದು: 'ಆಗ ತನ್ನ ಇಂಗ್ಲೀಷ್ ಎಷ್ಟು ಒಳ್ಳೆಯದಿತ್ತು. ಪ್ರಿನ್ಸಿಪಾಲ್‌ರೂ ಮೆಚ್ಚಿ ಹೊಗಳಿದ್ದರು. ಕನ್ನಡವೂ ಅದರಂತೆಯೇ. ನಾನು ಇಂಟರ್‌ನಲ್ಲಿದ್ದಾಗ ನನ್ನ ವಿಷಯ ಕನ್ನಡವಲ್ಲವಾದರೂ ಕಾಲೇಜ್ ಮಿಸೆಲೆನಿಗೆ ಒಂದು ಕವನವನ್ನು ಬರೆದು ಕೊಟ್ಟಿದ್ದೆ. ಎಷ್ಟು ಒಳ್ಳೆಯದಾಗಿತ್ತದು! ಒಂದೆರಡು ಅಭಿನಂದನಪರವಾದ ಪತ್ರಗಳು ಕೂಡ ಬಂದಿದ್ದುವು. ಆದರೆ...ಆ ವಿದ್ಯೆ, ಆ ಕನ್ನಡ, ಇಂದು ಬಾಳುವೆಗೆ ಏನೂ ಉಪಯೋಗ ಬೀಳದಾದುವಲ್ಲ! ಹಾಸಿಗೆ ಹಿಡಿದ ತಾಯಿಗೆ ಬೆಚ್ಚಗೆ ಹೊಚ್ಚಲು ಒಂದು ಶಾಲನ್ನು ಸಂಪಾ ದಿಸಲೂ ಸಹಾಯವಾಗಲಾರವಲ್ಲ!... ಹೀಗೆ ಏನೇನನ್ನೋ ವಿಚಾರಿಸುತ್ತಿ ರುವಾಗಲೆ, ಮನಸ್ಸು ಉದ್ವಿಗ್ನತೆಯಿಂದ ಯಾವುದೊ ಒಂದು ನಿಶ್ಚಯಕ್ಕೆ ಬಂದು ನಿಂತಂತಾಯಿತು. ಮುಖವೂ ಪ್ರಸನ್ನವಾಯಿತು. ತಲೆಗೆ ಟೊಪ್ಪಿಗೆಯನ್ನು ಹಾಕಿಕೊಂಡು ಅಂಗಡಿಯಲ್ಲಿ ಕಾಲಿಟ್ಟನು.

'ಕಿಟ್ಟಪ್ಪಾ, ಬರಲಿಕ್ಕೆ ತಡವಾಯಿತೆಂದು?' ಶೇಟಜಿಯವರು ಕೇಳಿ ದರು. 'ಮನೆಯಲ್ಲಿ ಅಮ್ಮನ ಮೈಯಲ್ಲಿ ನೆಟ್ಟಗಿಲ್ಲ ಸ್ವಲ್ಪ ನಿಲ್ಲಬೇಕಾ ಯಿತು' ಎಂದು ಹೇಳಿ ತಿರುಗಿ ಶೇಟಜಿಯವರು 'ಏನಾಗಿದೆ?' ಎಂದು ಕೇಳುವುದಕ್ಕಿಂತ ಮುಂಚಿತವಾಗಿಯೆ ತಾನು ಬರೆಯುವ ಸ್ಥಳಕ್ಕೆ ಹೋಗಿ ಕುಳಿತು ಬಿಟ್ಟ. 'ಬೇಗನೆ ಕೆಲಸ ತೀರಿಸಿಕೊಂಡು ಹೋಗಬೇಕೆಂದಿ

ದ್ದಾನೇನೋ!' ಎಂದುಕೊಂಡು ಶೇಡಜಿಯವರೂ ಅಷ್ಟಕ್ಕೇ ಸುಮ್ಮನಾದರು.

ಕಿಟ್ಟು ಬರೆಯಲು ಕುಳಿತುಕೊಳ್ಳುವ ಸ್ಥಳವು ಶಾಂತವಾದುದು. ಅಲ್ಲಿ ಗಿರಾಕಿಗಳ ಗಲಾಟೆಯಿಲ್ಲ. ಸುತ್ತೆಲ್ಲ ಜವುಳಿಯ ನಗಗಳಿದ್ದರೂ, ಅದಾವಾಗಲೋ ಒಮ್ಮೊಮ್ಮೆ ಒಬ್ಬ ಆಳು ಬಂದು ಬೇಕಾದುದನ್ನಷ್ಟು ಎತ್ತಿ ಒಯ್ಯುವನಷ್ಟೆ!

ಕಿಟ್ಟು ಬರೆಯಲು ಕುಳಿತ; ಕೀರ್ದಿಯನ್ನು ಕೈಯಲ್ಲಿ ತಕ್ಕೊಂಡ ಮಸಿಯಲ್ಲಿ ಲೆಕ್ಕಣಿಕೆ ಅದ್ದಿದ. ಬರೆಯಲು ಕೈಸಾಗಲಿಲ್ಲ. ಹಾಗೆಯೆ ಕುಳಿತ. ಮನಸ್ಸು ವಿಚಾರಮಾಲಿಕೆಯನ್ನು ಮುಡಿಯುತ್ತ ಮುಂದೆ ಸಾಗತೊಡಗಿತು; ಲೆಕ್ಕಣಿಕೆಯ ಮಸಿ ಆರಿತು. ಮತ್ತೆ ಅದ್ದಿದ, ಬರೆಯಲೆಂದು. ಮತ್ತೂ ಬರೆಯಲಾಗಲಿಲ್ಲ. ಕಿರ್ದಿಯನ್ನು ಬದಿಗೆ ಇಟ್ಟ, ಲೆಕ್ಕಣಿಕೆಯನ್ನು ಒಗೆದ, ಸುತ್ತಲೂ ನೋಡಿದ. ಚಟ್ಟನೆ ಎದ್ದು ನಿಂತ. 'ಏನೇ ಆಗಲಿ, ಹಾಗೆ ಮಾಡದೆ ಗತಿಯೇ ಇಲ್ಲ; ಈಗಲೇ ನೋಡಿ ಇಡಬೇಕು' ಎಂದು ತನ್ನಲ್ಲಿ ತಾನೇ ಅಸ್ಫುಟವಾಗಿ ಗುಣುಗುಟ್ಟಿದ. ಜವುಳಿಯ ಕಪಾಟುಗಳನ್ನೆಲ್ಲ ಕಿತ್ತು ಹಾಕತೊಡಗಿದ. ರಗ್ಗುಗಳನ್ನೆಲ್ಲ ಒಂದೊಂದಾಗಿ ಇಳುಹಲಾರಂಭಿಸಿದ. 'ಇದು ಒಳ್ಳೆಯದಿದೆ! ಮಳೆಗಾಲದಲ್ಲಿ ಹೊದೆಯಲಿಕ್ಕೆ; ಆದರೆ ಇದರ 'ಕಲರ್' ಒಳ್ಳೆಯದಿಲ್ಲ. ಇಂತಹದೆ ಮತ್ತೊಂದನ್ನು ನೋಡಬೇಕು!' ಎಂದು ಕಪಾಟಿನತ್ತ ದೃಷ್ಟಿಯನ್ನು ಬೀರಿದ. ಕೂಡಲೆ 'ನಾನೇನು ಹಣ ಕೊಟ್ಟು ಕೊಳ್ಳಬೇಕಾಗಿದೆಯೇ? ಇಷ್ಟೇಕೆ ಚಿಕಿತ್ಸೆ?' ಎಂದುಕೊಂಡನೇನೊ! ಮುಖದಲ್ಲಿ ಹುಚ್ಚುನಗೆಯೊಂದು ಅರಳಿತು. 'ಯಾವುದೇ ಇರಲಿ, ಕೈಗೆ ಬಂದದ್ದು ಕೈಲಾಸ!' ಎಂದುಕೊಂಡು' ಅದನ್ನೇ ಮೇಲೆ ತೆಗೆದು ಇಟ್ಟು, ಬರೆಯುವ ಸ್ಥಳಕ್ಕೆ ಬಂದು ಕುಳಿತ.

ಬುದ್ಧಿಬಲವಿದ್ದವನು ತಪ್ಪು ಮಾಡಲು ಮನಸ್ಸುಮಾಡಿದರೂ, ದಾರಿ ತಪ್ಪಲು ಸುಲಭಸಾಧ್ಯವಾಗುವುದಿಲ್ಲ. ಕಿಟ್ಟು ವಿಚಾರಿಸತೊಡಗಿದ. 'ಇದೇನು ನನ್ನ ವಿಚಾರ? ನಾನಿಷ್ಟು ಕಲಿತವನು, ತಿಳಿದವನು....! ತುಡುಗು ಮಾಡಲು ಯೋಚಿಸಿದೆನೇ? ಈ ಮರ್ಕಟಮನಸ್ಸು, ಕ್ಷಣದಲ್ಲಿ ಬೇಕಾದುವನ್ನು

ಮಾಡಲೂ ಮುಂದೊಡುವುದಲ್ಲ....! ನಾನು ಕಳ್ಳನೆನಿಸಿಕೊಳ್ಳಲೇ?.... ಕಳವು! ಕಳವು!... ಕೆಟ್ಟ ಕೆಲಸ! ಮಹಾ ಪಾಪ! ಇಂತಹ ಕೀಳು ಕೆಲಸ ನನ್ನಿಂದಾಗದು! ಸುಧಾರಿಸಿದವನಾದ ನನ್ನ ಮನಸ್ಸೇ ಹೀಗೆಂದ ಮೇಲೆ, ಅಶಿಕ್ಷಿತ ಜನರ ಮನಸ್ಸಿನ ಹಂತವೆಲ್ಲಿ? ಅಂತೆಯೆ ಸಮಾಜದಲ್ಲಿ ಇಷ್ಟು ಕಳವು! ಕೊಲೆಗಳು! ನಾನೂ ಅಂತಹ ಕಳ್ಳರಲ್ಲೊಬ್ಬನಾಗಲೇ?.... ಆಗಲಾರೆ! ಎಂದೂ ಆಗಲಾರೆ....ಮಾಲಕನನ್ನು ಕೇಳಲೆ? ಕೇಳಿದರೆ ಕೊಟ್ಟಾರೆ?.. ಇಲ್ಲ ಇಲ್ಲ; ಕೇಳಿದರೆ ಕೊಡುವುದಿಲ್ಲ! ಖಂಡಿತ ಕೊಡುವುದಿಲ್ಲ!....ಕೇಳಿದರೆ ಕೊಡುವುದಿಲ್ಲ; ಕೊಳ್ಳಲು ಕೈಯಲ್ಲಿ ಕಾಸಿಲ್ಲ! ಕದಿಯುವುದು ಕೆಡುಕು! ಆದರೆ....ಮನೆಯಲ್ಲಿ ತಾಯಿ 'ಚಳಿ! ಚಳಿ!' ಎಂದು ನಡುಗುತ್ತಿರುವಳಲ್ಲ! ಏನು ಆರ್ತಸ್ವರವದು!....ಅದನ್ನು ಮತ್ತೆ ಮತ್ತೆ ನನ್ನಿಂದ ಕೇಳುವುದಕ್ಕಾಗು ವುದಿಲ್ಲ! ಕೇಳಲಾರೆ!' ಕಿಟ್ಟುವಿನ ಮೈ ನಡುಗಿತು. ಕಣ್ಣು ಕುಣಿಕೆಯಲ್ಲಿ ನೀರೊಸರಿತು. ಮನೆಯಿಂದ ಹೊರಬೀಳುವಾಗ ಹೊತ್ತುಕೊಳ್ಳಲು ಕೇಳಿದ ಅಮ್ಮನ ಮಾತುಗಳು ಒಂದೇಸವನೆ ಕಿವಿಯಲ್ಲಿ ಸುತ್ತತೊಡಗಿದುವು. 'ಬೇಕು; ಅಮ್ಮನಿಗೆ ಬೆಚ್ಚಗೆ ಹೊದ್ದಿಸಲು ಬೇಕು! ಅದನ್ನು ತಂದುಕೊಡು ವುದು ಆಕೆಯ ಮಗನಾದ ನನ್ನ ಕರ್ತವ್ಯ, ಆದರೆ....ಅದನ್ನು ಸಂಪಾದಿ ಸಿಕೊಡುವಷ್ಟು ನನ್ನಲ್ಲಿ ಸಾಮರ್ಥ್ಯವಿಲ್ಲ. ಅನುಕೂಲತೆಯಿಲ್ಲ! ಆದಕ್ಕೆ ಉಳಿದುದೊಂದೇ ಉಪಾಯ....!'

ಅದೇ ದಿವಸ ಸಂಜೆಗೆ ಕಿಟ್ಟುವಿನ ಮಾತೃಪ್ರೇಮವು ಆತನ ವಿವೇಕ ವನ್ನು ಗೆದ್ದಿತು.

೪

ಈಗ ಕಿಟ್ಟು ಪೋಲೀಸ ಸ್ಟೇಶನಿನ ಒಂದು ಮೂಲೆಯಲ್ಲಿ. ಮೋರೆ ಒಣ ಗಿದೆ. ಕಣ್ಣು ಕೆಂಪಗಾಗಿವೆ. ಕಣ್ಣೀರು ಹರಿದು ಹರಿದು ಗಲ್ಲಗಳು ಹಸಿಯಾ ಗಿವೆ; ಧೂಳುಕೂತು ಹೊಲಸಾಗಿವೆ. ಮೈಯಲ್ಲಿಯ ಶರಟಿಗೆಲ್ಲ ಕೆಸರುಹತ್ತಿದೆ. ತಲೆಯ ಮೇಲೆ ಟೊಪ್ಪಿಗೆಯಿಲ್ಲ. ಮನದಲ್ಲಿ 'ನಾನೇಕೆ ಹಾಗೆ ಮಾಡಿದೆ? ಯಾವ ಕೆಟ್ಟ ಕಾಲವು ಆ ಕಳವಿಗೆ ಚೈತನ್ಯಕೊಟ್ಟಿತೊ! ನಿನ್ನೆಯ ಸಂಜೆ- ಬೇಡ, ಮರಳಿ ನೆನೆಯುವುದೇ ಬೇಡ—ಎಂತಹ ಭೀಕರ ಒದೆತಗಳವು! ಅದೂ ದಾರಿಯಲ್ಲಿ! ಅಂಗಡಿಯವರೆಲ್ಲ ನೋಡುತ್ತಿದ್ದರು; ಹುಡುಗರು ನಗು

ತ್ತಿದ್ದರು ; ಕಳ್ಳ ! ಕಳ್ಳ ! ಎಂದು ಕೂಗಿಕೊಳ್ಳುತ್ತಿದ್ದರು ; ಜನರೇನೇನೊ ಆಡಿಕೊಳ್ಳುತ್ತಿದ್ದರು ! ನೆಲಕ್ಕೆ ಮುಗ್ಗರಿಸಿಬಿದ್ದರೂ ಹಾಗೆಯೆ ಎಳೆದರಲ್ಲ ! ಒದೆದರಲ್ಲ ! ಏನು ನಿಷ್ಕರುಣೆಗಳು ! ದಾರಿಯಲ್ಲಿಯ ಒಂದೊಂದು ಮಾತಿನ ಪೆಟ್ಟಿನ ನೋವಿಗೆ ಇಲ್ಲಿ ಹೊಡೆದ ನೂರು ನೂರು ಹೊಡೆತಗಳ ನೋವೂ ಸರಿಯೆನಿಸದು. ಎಂತಹ ಅಪಮಾನಕರವಾದ ಸಂಗತಿಯದು ! ಜನರಲ್ಲಿ ನಾಳೆ ಹೇಗೆ ಮೋರೆತೋರಿಸಲಿ ?.... ಮೋರೆ ತೋರಿಸುವುದು....ಇಲ್ಲಿಂದ ಬಿಟ್ಟರಲ್ಲವೆ ? ನಿನ್ನೆಯ ಸಂಜೆ ಶಾಂತೆ ಎಷ್ಟು ಹೊತ್ತು ದಾರಿಕಾಯ್ದಳೊ ! ತಾಯಿ ಹಾಸಿಗೆ ಹಿಡಿದವಳು; ಶಾಂತೆಗಂತೂ ಕೂಸು ಕೈಬಿಡುವುದಿಲ್ಲ—ಎಂದಮೇಲೆ ಹೊರಗೆ ಬಂದು, ನಾನೆಲ್ಲಿ—ಎಂಬುದನ್ನು ಕೇಳುವವರಾದರೂ ಯಾರು ? ಯಾರನ್ನು ? ಒಂದುವೇಳೆ ಕಂಡವರು ಯಾರಾದರೂ ಹೇಳಿದ್ದರೆ ಎಷ್ಟು ನೊಂದುಕೊಂಡರೊ ! ಮೊದಲೇ ನಾನು ಬರುವಾಗ, ನನ್ನ ಅಸಹಾಯ ಸ್ಥಿತಿಯನ್ನು ಕಂಡು ಮರುಗುತ್ತಿದ್ದಳು ತಾಯಿ ! ಈ ಸಂಗತಿಯನ್ನು ಕೇಳಿದ್ದರಂತೂ........' ಎಂದು ಏನೇನನೊ ವಿಚಾರಿಸುತ್ತಿರುವಾಗಲೆ— 'ಹರಾಮಖೋರ್ ! ಮತ್ತೇನು ಕದ್ದಾನೊ ! ಒಂದೂ ಹೇಳುವುದಿಲ್ಲ, ಲಾಕಪ್ಪಿಗೆ ಒಯ್ದು ಬಿಡಿರಿ ! ಹೋಗಲಿ, ಹಾಳಾಗಿ ! " ಎಂದು ಹತ್ತರನಿಂತ ಪೋಲೀಸನಿಗೆ ಹವಾಲದಾರನು ಹೇಳಿದನು.

ಕಿಟ್ಟು ತಡವರಿಸುತ್ತ ' ಇಲ್ಲ ! ನಾನೆಂದೂ ಕಳವು ಮಾಡಿಲ್ಲ ! ಮನೆಯಲ್ಲಿ ನಮ್ಮ ತಾಯಿ ಬೇನೆಯಿಂದ ಮಲಗಿದ್ದಾಳೆ. ' ಚಳಿ ! ಚಳಿ !' ಎಂದಳು. ಬೇರೆಯೇನೂ ಉಪಾಯಗಾಣದೆ ಹೀಗೆ ಮಾಡಿದೆ. ನಾನೆಂದೂ ಇಂತಹ ಕೆಲಸ ಮಾಡಿದವನಲ್ಲ. ಇದನ್ನು ಮಾಡಿದ್ದಕ್ಕೇ ತುಂಬಾ ಪಶ್ಚಾತ್ತಾಪಪಡುತ್ತಿದ್ದೇನೆ. ನಾನು ಹುಂಬನೆಂದು ತಿಳಿಯಬೇಡಿರಿ. ಕಲಿತವನಿದ್ದೇನೆ! ನನಗೂ ಬುದ್ಧಿ ಇದೆ. ಒಮ್ಮೆ ಕಾಲು ಜಾರಿದ ಮೇಲೆ ಮತ್ತೆ ಮತ್ತೆ ಹಾಗೆಯೆ ಆಗುತ್ತದೆಯೆಂದೇನೂ ಅಲ್ಲ!' ಎಂದ.

' ಮುಚ್ಚು ಬಾಯಿ ಸೂ... ....ಮಗನೆ! ಕಲಿತವನಂತೆ! ತಿಳಿದವ! ತಿಳಿದವರು ಹಿಂಗ ಮಾಡತಾರs ? ಮತ್ತೆ ನಮ್ಮ ಮುಂದ ಹಾಂಗs

ಹೀಂಗs ಅಂತ. ಹೇಳತಾನ! ದೊಡ್ಡ ದೊಡ್ಡ ಮಾತು ಹೇಳವನಿಗೆ ಕಳವು ಮಾಡಲಿಕ್ಕೇನಾಗಿತ್ತು? '

' ರಾವಸಾಹೇಬರೆ, ನಾ ಹೇಳುವುದನ್ನಾದರೂ ಕೇಳಿಕೊಳ್ಳಿರಿ ವಿಚಾರ ಮಾಡಿರಿ! ಆ ಮೇಲೆ ಬೇಕಾದುದನ್ನು ಹೇಳಿರಿ! ಏನೆಂದರೂ ಮನುಷ್ಯನ ಕರ್ತವ್ಯಾಕರ್ತವ್ಯಗಳಿಗೆ ಅವನಷ್ಟೇ ಅಲ್ಲದೆ, ಅವನ ಸುತ್ತಲಿನ ಪರಿಸ್ಥಿತಿಯೂ ಹೇಗೆ ಕಾರಣವಾಗಿರುತ್ತದೆಯೆಂಬುದನ್ನೂ ವಿಚಾರ ಮಾಡಿರಿ! ನನ್ನ ಸ್ಥಿತಿಯಲ್ಲಿ ಇದ್ದರೆ ನೀವೂ ಇದೇ ಕಳವು... ...

' ಬಾಯಿಮುಚ್ಚು ! ಏನು ಜೊಗಳತಿದ್ದಿಯಾ ? ಎಲ್ಲಿ ಇದ್ದೀದಿ ನೆನಪದನs ನಿನಗ ? ' ಎಂದು ಎದ್ದೇಬಂದ, ಹವಾಲದಾರ.

ಧಪ್.........ಧಪ್...... ...ಧಪ್............ ಧಪ್..........

" ಅಯ್ಯೋ... ಸತ್ತೆ.... ಸತ್ತೆ !.... ಸತ್ತೆ.... "

೫

ಕಿಟ್ಟುವಿನ ವಿದ್ಯೆ, ಅಭ್ಯಾಸ, ಕಾರ್ಯಕುಶಲತೆಗಳೆಲ್ಲಾವುದೂ ಆತನ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಸಹಾಯಕವಾಗಲಿಲ್ಲ !

ಕಿಟ್ಟು ಜೇಲಿನಲ್ಲಿ ನರಳುವಾಗ— ತಾಯಿ ಮನೆಯಲ್ಲಿ ' ಚಳಿ ! ಚಳಿ ! ' ಎಂದು ನಡುಗಿ ಜೀವಬಿಡುತ್ತಿರುವಾಗ— ಶಾಂತೆ ' ನಿನ್ನೆಯಿಂದಲೂ ಗಂಡ ಮನೆಗೆ ಯಾಕ ಬರಲಿಲ್ಲ ' ಎಂದು ಚಿಂತಿಸುತ್ತಿರುವಾಗ ' ಒಳ್ಳೆದಾಯ್ತವನಿಗೆ ! ಎಷ್ಟುಸಾರೆ ಹೀಂಗ ಕಳವು ಮಾಡಿದ್ದನೊ ! ಕಲಿತವನಂತ ! ಕಲಿತ ಕಳ್ಳನಲ್ಲವೆ ? ' ಎಂದು ಜನರು ಆಡಿಕೊಳ್ಳುತ್ತಿದ್ದರು.



# ಬಂಧನದಲ್ಲಿ



"ಭೀಮಾ ಮಾಸ್ತರರನ್ನು ಇಷ್ಟ ಮೋಟರ ಸ್ಟ್ಯಾಂಡಿನ ತನಕ ಕಳಿಸಿ ಬಾರಪ್ಪಾ."

ಬಾಯಕ್ಕ ನೆರೆಮನೆಯುವರ ಆಳಿಗೆ ವಿನಯದಿಂದ ಹೇಳಿ ನನ್ನ ಕಡೆಗೆ ಹೊರಳಿ ಅಂದಳು:

"ಬಿಡಿರಿ, ನಿಮ್ಮ ಬ್ಯಾಗ ತಗೊಂಡ ಬರತಾನ ಭೀಮಾ''

''ಯಾತಕ್ಕ ? ನಾ ಕೈಯೊಳಗ ಸಹಜ ಒಯ್ಯತೇನೆ"

ನಾನು ಹೀಗೆ ಹೇಳಿದೆನಾದರೂ ಭೀಮಪ್ಪ ಬರುವ ದಾರೀ ಕಾಯುತ ನಿಂತೆ ತುಸು ಕಾಲ ಓಡಿತು. ಮಗ್ಗುಲಿನ ಮನೆಯಿಂದ ಆತ ಇನ್ನೂ ಬರಲಿಲ್ಲ ಹಾಗೆಯೇ ಭೀಮಪ್ಪನ ಕಾಲ್ಪನಿಕ ಚಿತ್ರ ಬಂದು ನನ್ನ ಕಣ್ಣಮುಂದೆ ಸುಳಿಯಿತು. ಮುಪ್ಪಿನ ಮುದುಕ, ಸೊರಗಿದ ಮೈಯು, ಹರಕು ಶರಟು, ಗಿಡ್ಡ ಧೋತರ, ಹೊಲಸು ರುಮಾಲು ಸುತ್ತಿದ ವ್ಯಕ್ತಿ, ಇಂಥ ವ್ಯಕ್ತಿಯು ಕೈಯಲ್ಲಿ ಬ್ಯಾಗು ಕೊಟ್ಟು ನಾನು ಕೈಬೀಸುತ್ತ ನಡೆಯುತ್ತ ಹೊಗುವದೆಂದರೆ! ಬೇಡವೆಂದಿತು ಮನಸ್ಸು ಮತ್ತೆ ಬ್ಯಾಗಿಗೆ ಕೈಯಿಕ್ಕಿದೆ.

ಅದನ್ನು ಕಂಡು ಬಾಯಕ್ಕ ಮತ್ತೆ ಕರೆದಳು.

''ಭೀಮಾ, ಲಗೂನ ಬಾರಪ್ಪ, ಅವರಿಗೆ ಹೊತ್ತಾತು"

''ಹೂನ್ರಿ!" ಎಂದು ಭೀಮಪ್ಪ ಲಗುಬಗೆಯಿಂದ ಉಟ್ಟ ಧೊತರಕ್ಕೆ ತನ್ನ ಹಸಿಯಾದ ಕೈಗಳನ್ನು ಒರಿಸಿಕೋಳ್ಳುತ್ತ ಹೊರಗೆ ಬಂದ. ಇನ್ನೂ ಇಪ್ಪತ್ನಾಲ್ಕು ವರ್ಷದ ತರುಣನಾತ. ಗಟ್ಟಿಮುಟ್ಟಾದ ಆಳು. ತಲೆಯ ಮೇಲೆ ಖಾದಿಯ ಟೊಪ್ಪಿಗೆ, ಮೈಯಲ್ಲಿ ಖಾದಿಯ ಶರ್ಟು, ಖಾದಿ ಅಂದರೆ ಗಿರಣಿಯ ಖಾದಿ, ಬಂದು ಅವಸರದಿಂದ ಬ್ಯಾಗಿಗೆ ಕೈಹಾಕುತ್ತ ಕೇಳಿದ.

''ಇದೇ ಅಲ್ಲೇನರಿ ಒಯ್ಯೋದು? "

''ಹೌದು; ಅದs ತಗೋ'' ಎಂದಳು ಬಾಯಕ್ಕ.

''ಹೋಗಿ ಬರುತ್ತೇನೆ ಅಕ್ಕಾ ನಾ.'' ಎಂದು ಹೇಳಿ ಮುನ್ನಡೆದೆ ನಾನು ಹಾಗೆಯೇ ಕಟ್ಟೆಯ ಮೇಲೆ ಸ್ವಲ್ಪ ಹೊತ್ತು ಬಾಯಕ್ಕ ನೊಡುತ್ತ

ನಿಂತು. ಮತ್ತೊಮ್ಮೆ ಭೀಮನಿಗೆ ಹೇಳಿದಳು.

"ಮೋಟಾರಿನಲ್ಲಿ ಕೂಡಿಸಿಯೋ ಬಾ"

"ಹೂನ್ರಿ! ಹಾಗೇ ಯಾತಕ್ಕ ಬರಲಿ? ಅದಕ್ಕs ಸ್ವಲ್ಪ ಹೊತ್ತಾದರೂ ಎಲ್ಲಾ ಕೆಲಸ ತೀರಿಸೇ ಬಂದೆ"

ಅರ್ಧ ತನ್ನಲ್ಲಿ ಅರ್ಧ ಹೊರಗೆ ನುಡಿದ ಭೀಮ.

"ಏನ ಕೆಲಸ ತೀರಿಸಿದಿಯೋ?"

ಭಾಂಡಿ ತಿಕ್ಕೋದ ಇತ್ತ ಏಳಿರಿ"

"ತಿಂಗಳಿಗೆ ಏನ ಕೊಡತಾರೋ ನಿನಗ?"

ಸಹಜ ವಿಷಯ ತಿಳಿಯುಕೊಳ್ಳಬೇಕೆಂದು ಕೇಳಿದೆ.

"ಏನಿಲ್ಲರೀ. ನಾನು ಅವರ ರೈತ." ಎಂದ ಭೀಮಪ್ಪ. ನನ್ನ ಕಲ್ಪನೆ ತಲೆ ಕೆಳಗಾಯಿತು. ಈತ ಅವರ ರೈತ. ರೈತನಾಗಿಯೂ ಮನೆಯಲ್ಲಿ ಪಾತ್ರೆ ತಿಕ್ಕಲು ಬಂದಿರುವ, ಈ ಟೆನಸ್ಸಿಬಿಲ್ಲಿನ ಅಮಲಿನಲ್ಲಿಯೂ ರೈತನ ಈ ಅವತಾರ. ನನಗೆ ಮೊದಲು ಆವನ ಮಾತಿನ ಮೇಲೆ ನಂಬುಗೆಯೇ ಹುಟ್ಟಲಿಲ್ಲ. ಆದರೂ ಕೇಳಿದೆ.

"ಎಷ್ಟ ಎಕರೆ ಹೊಲಾ ಅದನೋ ನಿನ್ನ ಕಡೆಗೆ?"

"ಹತ್ತಹನ್ನೆರಡ ಏಕರೆ ಅದ ಅಲ್ಲರಿ!"

"ಎಷ್ಟ ವರ್ಷ ಆಯ್ತು ಮಾಡ್ತ ಬಂದಿರುವಿ?"

"ನಾಲ್ಕೈದು ವರ್ಷ ಆಯ್ತಲ್ಲ."

"ಆಮೇಲೇನು ನಿನ್ನ ಕಡೆಯಿಂದ ಅವರಿಗೆ ಹೊಲ ತೆಗೆಯಲಿಕ್ಕೆ ಬರುವದಿಲ್ಲ." ಎಂದು ನಾನು ಕಾಯಿದೆಯನ್ನು ಹೇಳಿದೆ. ಆತ ಸುಮ್ಮನೆ ಇದ್ದ. ಹಾಗೆಯೇ ನನ್ನ ಹಿಂದೆ ಹಿಂದೆ ಬರುತ್ತಿದ್ದ. ಈಗ ಸ್ವಲ್ಪ ಹೊತ್ತು ಏರಿತ್ತು ಎಳೆಬಿಸಿಲು ಉಪ್ಪರಿಗೆಗಳ ತುದಿಗೆ ಬಂಗಾರದ ಕಿರೀಟದಂತೆ ಒಪ್ಪುತ್ತಿದ್ದಿತು. ಆದರೂ ಪಶ್ಚಿಮ ದಿಕ್ಕಿನಿಂದ ಸಾವಕಾಶವಾಗಿ ಮಂಜು ಬರುತ್ತಲಿತ್ತು ತಂಗಾಳಿಯಿಂದ ಅದು ಚಲಿಸುತಲಿತ್ತು. ನಾಲ್ಕು ಹೆಜ್ಜೆ ಹೋದ ಮೇಲೆ ಮತ್ತೆ ಕೇಳಿದೆ.

"ನಿನ್ನ ಮನೆ ಎಲ್ಲಿಯೋ?"

"ಅಲ್ಲೇ ಸಾವಕಾರರ ಹಿತ್ತಲೊಳಗೇ ಇದ್ದೇವಿ. ಪಾಯಖಾನೆ ಹತ್ತರ

ಸ್ವಲ್ಪ ಚಪ್ಪರ ಹಾಕ್ಕೊಳ್ಳಿಕ್ಕೆ ಜಾಗಾ ಕೊಟ್ಟಾರ?"

"ಮಳಿಗಾಲದೊಳಗ ಏನ ಮಾಡ್ತೀರಿ?"

"ಚಪ್ಪರ ಅಂದರ ನಾಲ್ಕು ತಗಡೂ ಅವರಿ!"

"ಅದಕ್ಕೇ ಚಪ್ಪರ ಅಂದಿ ಹೌದ?''

"ಏನಾದರೂ ಅನ್ನೊದ ಅಲ್ಲರಿ?" ಭೀಮಪ್ಪನ ದನಿಯಲ್ಲಿ ನಿರಾಶೆ ತುಂಬಿತ್ತು.

"ಹಾಂಗಾದರ ನಿನ್ನ ಊರ ಇದು ಅಲ್ಲ ಅನ್ನು''

"ಎಲ್ಲೀದರೀಯಪ್ಪ ಹತ್ತುವರ್ಷದ ಹಿಂದ ಇಲ್ಲೆ ಬಂದೀನಿ, ಆಗ ನಮ್ಮ ಅವ್ವ ಇದ್ದಳು."

"ಈಗ ಎಷ್ಟ ಜನರು ನೀವು ಮನಿಯೊಳಗೆ?" ಎಂದು ನಡುವೆಯೇ ನಾನು ಕೇಳಿದೆ.

"ನಾನು, ನಮ್ಮಾಕಿ ಇಬ್ಬರೀ."

"ಮದುವೆ ಆಗಿ ಎಷ್ಟು ವರ್ಷ ಆಯ್ತು?''

"ಏನು ಸುಡತೀರಿ ಬರ್ರಿ!" ಬೇಸರದ ದನಿಯಲ್ಲಿ ನುಡಿದು ಭೀಮಪ್ಪ ಮುನ್ನಡೆದ. ನಾನೂ ನಾಲ್ಕು ಹೆಜ್ಜೆ ಮುಂದೆ ಹೋದ ಮೇಲೆ ಕೇಳಿದೆ.

"ಯಾಕೋ?"

"ಅದೇ ಮದಿವೀಸಾಲದೊಳಗ ವದ್ದಾಡಲಿಕ್ಕೆ ಹತ್ತೇನಿ."

"ಯಾರ ಕೊಟ್ಟಾರೋ ಸಾಲಾ?"

"ಮತ್ತ್ಯಾರ ಕೊಡತಾರರೀ ನಮಗ? ಸಾವಕಾರರ? ಅಲ್ಲೇ ದುಡಿಯೋದು, ಅಲ್ಲೇ ತಿನ್ನೋದು."

"ಎಷ್ಟ ಅದನೋ ಇನ್ನೂ ಕೊಡೋದು?"

"ಮುನ್ನೂರು ಅದ ಅಲ್ಲರಿ''

"ಈ ಸಾರೆ ಸುಗ್ಗಿ ಅದರ ತೀರತದಲ್ಲ?" ಎಂದೆ ನಾನು.

"ಸುಗ್ಗಿಗೇ ನಮಗs ಏನ ಸಂಬಂಧರಿ?"

ಅವನ ಮಾತನ್ನು ಕೇಳಿ ಆಶ್ಚರ್ಯವಾಯಿತು. ಹೊಲದಲ್ಲಿ ದುಡಿಯುವ ರೈತನೀತ. ಅವರ ಹೊಲ ಮಾಡಿರುವ. ಆದರೆ ಸುಗ್ಗಿಗೆ ಸಂಬಂಧವಿಲ್ಲ ಅನ್ನುವ ಇದೆಂಥ ಮಾತು? ಎಂದು ಬೇಕಂತಲೇ ಮೂಲ ಸಂಗತಿಗೆ ಕೈಹಾಕಿದೆ.

"ಹೊಲದೊಳಗಿನ ಬೆಳಿ ನಿಮಗ ಕೊಡೂದಿಲ್ಲೇನೊ?"

“ಇಲ್ಲರಿ ಎರಡ ಎತ್ತು ಕೊಂಡು ಕೊಟ್ಟಾರರೀ, ಹೊಲಾ ಹರಗ ತೇನ್ರಿ. ಬಿತ್ತತೇನ್ರಿ, ನನ್ನ ಹೆಂಡತಿ ನಾನೂ ದುಡಿತೇವ್ರಿ, ರಾಶಿಯೊಳಗ ಬಂದು ಕೂತು ಬೆಳಿ ತರತಾರು, ನಮಗೂ ಸ್ವಲ್ಪ ಕಾಳಕಡಿ ಕೊಡತಾರು. ಸ್ವಲ್ಪ ಸಾಲಾನೂ ಕಡಕೊಳ್ಳತಾರು.”

“ಕಬುಲಾಯತಿ ಇಲ್ಲೇನೋ?” ಮುರಕದಿಂದ ಕೇಳಿದೆ ನಾನು.

“ಇತ್ತರಿ, ಎರಡ ವರ್ಷದ ಹಿಂದ, ಈಗ ಮನೆಯಿಂದ ಕವಾತ ಇಟ್ಟೇನಿ ಅಂತ ಕೇಳಿದವರ ಮುಂದ ಹೇಳತಾರ.”

“ನೀನು ಸರಕಾರಕ್ಕ ತಿಳಿಸಬೇಕು”

“ಸರಕಾರಕ್ಕ ತಿಳಿಸಿ ನಾವು ಹೊಟ್ಟೆಗೇನ ತಿನ್ನೋದ ಅಣ್ಣಾ?”

ಬಸ್ ನಿಲ್ದಾಣ ಸಮೀಪಕ್ಕೆ ಬಂತು. ಬೀದಿ ಬೀದಿಗಳಲ್ಲಿ ಸ್ವಾತಂತ್ರ್ಯ ದಿನೋತ್ಸವದ ಸಿಂಗರ ನಡೆದಿದ್ದಿತು. ಮುನಸಿಪಾಲ್ಟಿಯ ಆಳುಹೋಳು ಗಳು ಅಲ್ಲಲ್ಲಿ ತೊರಣ, ಚವಮಾನುಗಳನ್ನು ಕಟ್ಟುತ್ತಿದ್ದಾರೆ, ಸಿಂಗರಿ ಸುತ್ತಿದ್ದಾರೆ

ಬಸ್ಸು ಈಗಾಗಲೇ ಹೊರಟು ಸಿದ್ಧವಾಗಿ ನಿಂತಿತ್ತು. ಹೋದವನೇ ಹತ್ತಿದೆ. ಭೀಮಪ್ಪ ಬ್ಯಾಗನ್ನು ತಂದು ಒಳಗೆ ಇಟ್ಟ. ಅವನ ಮುಖ ಅರಳಿತ್ತು. ಬೇಗನೆ ಮನೆಗೆ ಹೋಗಲು ಸಿಕ್ಕಿತೆಂದು ಇರಬೇಕು. ಅವನ ಕೈಯಲ್ಲಿ ಎಂಟಾಣೆ ಇಟ್ಟೆ.

“ಬ್ಯಾಡರಿ. ಬಾಯಕ್ಕೇನು ಹೊರಗಿನವರೇನು ತಕ್ಕೊಳ್ಳರಿ!” ಎಂದ ಭೀಮಪ್ಪ ಮಾತಿನಲ್ಲಿ ನಟನೆ ಇರಲಿಲ್ಲ.

“ಆದರೇನಾಯಿತು ತಗೋ.” ಎಂದು ಆಗ್ರಹ ಮಾಡಿದೆ. ಆತ ತಕ್ಕೊಂಡು, ನಮಸ್ಕಾರ ಮಾಡಿ ಹೊರಳಿ ನಡೆದ.

ಭಾರತಕ್ಕೆ ಸ್ವಾತಂತ್ರ್ಯ ಬಂತು! ಆದರೆ ಭೀಮಪ್ಪನಿಗೇನು? ಉಣ್ಣ ಲಿಲ್ಲ, ತೊಡಲಿಲ್ಲ. ಸರಕಾರ ಕಾಯಿದೆಗಳನ್ನು ಪಾಸು ಮಾಡುತ್ತಿದೆ. ರೈತರ್ನ್ನ ಹಿತ ಬಯಸುತ್ತಿದೆ. ಅವುಗಳ ಪ್ರಯೋಗವಾಗುವುದು ಈ ರೀತಿ ಯಾರ ಕಾಯಿದೆ ಬಂದರೇನು? ಸ್ವಾತಂತ್ರ್ಯ ಸಿಕ್ಕರೇನು? ಭೀಮಪ್ಪ ಇನ್ನೂ ಬಂಧನದಲ್ಲಿಯೇ ಅಲ್ಲವೆ? ಎಂದೇನೇನೋ ವಿಚಾರಿಸುತ್ತಿದ್ದೆ.

ಕಣ್ಣಿಗೆ ದೂರದಲ್ಲಿ ಹೋಗುವ ಭೀಮಪ್ಪನ ತಲೆಯ ಹೊಲಸು ಟೊಪ್ಪಿಗೆ ಕಾಣುತ್ತಿದ್ದಿತು. ಅದರ ಮೇಲೆ ಸ್ವಾತಂತ್ರ್ಯೋತ್ಸವದ ತೋರಣ ಹಾರಾಡುತ್ತಿತ್ತು!

# ಮಾತು--ಕತೆ



ನಾಡಿಗೆ ಸ್ವಾತಂತ್ರ್ಯ ಬಂದಿದೆ. ಎಲ್ಲೆಲ್ಲೂ ಸ್ವೈರಾಚಾರ ಹೆಚ್ಚಿದೆ ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರ ಎನ್ನುವಂತೆ ನಾಡಿನ ಜನ ವರ್ತಿಸುತ್ತಿದೆ; ಬಹುದಿನದ ಸಾಧನೆಯಿಂದ ಪಡೆದ ಸಿದ್ಧಿಯನ್ನು ಮಣ್ಣುಗೂಡಿಸುತ್ತಲಿದೆ. ಇದನ್ನು ತಡೆಯಲಿಕ್ಕೆ ಭಾರತದ ಹಳ್ಳಿ-ಹಳ್ಳಿಗಳಲ್ಲಿಯೂ ಗ್ರಾಮ ಸಂರಕ್ಷಕ ದಳಗಳನ್ನು ಕಟ್ಟಲಾಗುತ್ತಿದೆ. ಈ ದಳದ ಸೈನಿಕನಾಗಿ ನಮ್ಮೂರನ್ನು ಕಾಯುವಾಗ ಕೇಳಿದ ಕೆಲವು ಮಾತುಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದೇನೆ. ಓದುಗರಿಗೆ ಇದೂ ಒಂದು ಕತೆ ಎನಿಸೀತೆಂದು ಭಾವಿಸಿದ್ದೇನೆ.

೧

" ನೋಡು ! ನಾಲ್ಕೂ ಮಕ್ಕಳನ್ನ ಸಂಬಾಳಿಸಿಕೊಂಡು, ನಾಲ್ಕು ದಿನ ಮರ್ಯಾದಿಯಿಂದ ಸಂಸಾರ ಮಾಡಿ ಹೋಗೋದಕ್ಕೂ ಬಹಳ ಬುದ್ಧಿವಂತಿಕಿ ಬೇಕಾಗ್ತsದ. ಮನೆಗೆ ಹಿರಿಯಳಾದ ನೀನೂ ದಿನಾ ಬೆಳಗಾದರೆ ಜಗಳಾಡತ ಕೂತರ, ನಾ ಯಾವ ಗಿಡಕ್ಕ ಜೋತಾಡಲಿ ? "

" ನಿಮ್ಮ ಮುಂದ ಮಾತನಾಡುವ ಮಾತs ಉಳಿಯಲಿಲ್ಲ. ಸಂಸಾರದೊಳಗ ಬರುವ ತೊಡಕು–ತೊಂದರೆಗಳನ್ನು ಹೇಳಿದರ, ನೀವು ಹಗ್ಗಾ ತಕೊಂಡು ಗಿಡಕ್ಕs ಹೋಗತೇನು ಅಂತೀರಿ. ನಾ ಏನೂ ಹೇಳsಬಾರದೂ ಅಂತಿರೋ ಹ್ಯಾಂಗ ? "

" ಹೇಳಲ್ಲ; ಹೇಳಲಿಕ್ಕೆ ಯಾರ ಬ್ಯಾಡ ಅಂತಾರ? ಮನಿಯೊಳಗ ನಾಲ್ಕು ಮಂದಿ ತಿನ್ನವರಿದ್ದಾರ, ಹೆಂಗಸರು ನಾಲ್ಕು ಮಂದಿ ಮಾಡವರಿದ್ದಾರ. ಇಷ್ಟಕ ದಿನಾ ಬೆಳಗಾದರ ಜಗಳ. ನಗ-ನಗತ ಹೇಳಿ, ಸೊಸೆಯಂದಿರಿಂದ ಕೆಲಸಾ ಮಾಡಿಸೋದ ಅದ. ಹೌದ ಅನ್ನಿಸಿಕೊಂಡು ನಾಲ್ಕ ದಿನಾ ಸಂಸಾರಮಾಡಿ ಹೋಗೋದ ಅದ. ಹತ್ತ ಸಲ ಹೇಳಿದರೂ ಇಷ್ಟು ತಿಳಿವೊಲ್ದು ನಿನಗ. ಹ್ಯಾಂಗ ಮೂರಿಪ್ಪತ್ತು ವರ್ಷದ ಮುದಿಕಿಯಾದಿಯೋ ಏನೋ ! "

" ನಿಮ್ಮ ಕೂಡ ದಿನಾ ಬೆಳಗಾದರ ನಾನೂ ಹೊಲಕ್ಕ ಬರತೇನಿ ನಡೆಯಿರಿ! ಅವರು ಏನ ಮಾಡಿಕೊಳ್ಳತಾರ ಮಾಡಿಕೊಳ್ಳಲಿ. ಹ್ಯಾಂಗೂ ಹಿರಿಯರು ತೋಡಿದ ಭಾವಿ ಅದ. ಅಲ್ಲೇ ನಂದೂ ಒಂದು ಸೀರೀ ಒರಸಿ, ಒಣಗಿಸಿಕೊಳ್ಳತೇನಿ. ಏನ ಮನಿಯಿಂದ ಪಲ್ಲೇ ರೊಟ್ಟಿ ತಂದು ಕೊಟ್ಟಾರು, ಅದನ್ನ ತಿಂದು ಕೂಡತೇನಿ. ಕುಸುಮಾನ ಕೂಡ ಇನ್ನ ನಾಲ್ಕ ದಿನಾನೂ ಕೂಡಿ ಇರೋದಕ್ಕ ನನಗ ಆಗದು. ಮನಿಗೆ ಬಂದು ಇನ್ನೂ ಆರು ತಿಂಗಳು ಆಗಿಲ್ಲ, ಇಷ್ಟರಲ್ಲೇ ಮನಿಯವರೊಳಗ ಎರಡ ಎಣಿಸಿದರ ಹ್ಯಾಂಗ ನಡೆಯಬೇಕು ಸಂಸಾರ? ಈಕಿಯ ಗಂಡ ಒಬ್ಬನss ಮನಿಯೊಳಗ ಉಣ್ಣುವವ ಇರತಾನss? ಬೆಳಗ್ಗೆದ್ದು, ನಿನ್ನ ಗಂಡನಿಗೆ ರೊಟ್ಟೀ ಕಟ್ಟಿಕೊಡೂ ಅಂತ ಹೇಳಿ ಕಳಿಸಿದರ, ಗಡಿಗಿಯೊಳಗಿನ ಕೆನಿಮೊಸರನ್ನೆಲ್ಲಾ ಒಬ್ಬನಿಗೇ ಹಾಕಿ ಕಟ್ಟಿ ಕೊಡುವುದಾ? ಉಳಿದ ಮೂರು ಮಂದಿ ಮಕ್ಕಳಿಗೆ ನಾ ಏನ ಬುತ್ತೀ ತುಂಬಿ ಕೊಡಬೇಕು? ನೀವs ಹೇಳರಿ! ಉಳಿದ ಸೊಸೆಯಂದಿರೂ ಹಾಲಿಗೆ ಹೆಪ್ಪು ಹಾಕಿದ್ಹಂಗ ಮುಖ ಮಾಡಿಕೊಂಡು ಇರತಾರ ಅವರು. ನೆರಿಮನೀ ಹೆಂಗಸರ ಮಾತ ಕೇಳಿ, ಜಗಳಕ್ಕೆ ನಿಲ್ಲತಾರ. ಹಿಂಗs ಏನಾದರೂ ಕಾರಣ ಆಗಿ, ದಿನಾ ಮನಿಯೊಳಗ ಜಗಳss ಜಗಳ! ಅದಕ್ಕೆಲ್ಲಾ ನಿನ್ನ ಸಣ್ಣ ಸೊಸಿ ಕುಸುಮಾನss ಕಾರಣ. ಮೊನ್ನೇ ಬಚ್ಚಲದೊಳಗಿನ ನನ್ನ ಸೀರಿನss ಒಂದು ಮರತು ಹ್ಯಾಂಗ ಒಗೆಯಲಿಕ್ಕೆ ಹೊಕತಾಳ ಆಕಿ? ಅಲ್ಲೇ ಗೂಟದ ಮ್ಯಾಗ ಇದ್ದ ತನ್ನ ಗಂಡನ ದೋತರಾ ಮರಿಯಲಿಲ್ಲಾ? ಎಲ್ಲಾ ಇದ್ದದ್ದು ಆಕಿಯ ಕಡೆ ಕಾಣಿ ನೋಡು!"

"ಹೀಂಗಿದ್ದರ ಪೇಟಿಯೊಳಗಿನ ಮನಿ ಹ್ಯಾಂಗೂ ತೆರವss ಅದ. ಅಲ್ಲಿ ಆ ಗಂಡ-ಹೆಂಡರನ್ನು ಇಟ್ಟು ಬಿಡೋಣ. ಏನು ಎರಡು ಚೀಲ ಜೋಳಾ ಕಾಳೂ ಒಯ್ದು ಒಗದರ ಆಯ್ತು. ಕುದಿಸಿ ತಿನ್ನತಾರ... ತೋಟಕ್ಕ ದುಡಿಯಲಿಕ್ಕೆ ಬರತಾರ ದಿನಾ ಬೆಳಗಾದರ ಈ ಕಟಕಟೀ ಬೇಡ."

"ಉಳಿದವರೂ ಹಾಂಗೇ ಬೇಡವರಲ್ಲ?"

"ಅವರೇನ ಬೇಡತಾರ? ಇವನ ಮದವಿ ಮೊನ್ನೇ ಆಗೇದ.

ಈಗಿನ ಹುಡುಗರು ! ಕೂಡಿ ನಗಬೇಕೂ ಕೆಲೀಬೇಕೂ ಅಂತಾವ. ಮನಿಯೊಳಗ ನಾಲ್ಕು ಮಂದಿಯೊಳಗ ಸಾಧಿಸೂದಿಲ್ಲ. ಅದಕ್ಕs ಇದೆಲ್ಲಾ ತಂಟಿ. ಆ ಮನಿಯೊಳಗ ನಾಲ್ಕುದಿನಾ ಇರಲಿ. ನಮ್ಮ ಬಾಬೂಗs ಬೇಕಾ ದಂಗ ಕಾಣ್ತsದ. ಮೊನ್ನೆ ಮನಿಗೆ ಮಲಗಲಿಕ್ಕೆ ಬರುವದರ ಸಲುವಾಗಿ, ತೋಟದೊಳಗ ತನ್ನ ಅಣ್ಣನ ಕೂಡಾ ನ್ಯಾಯ ಹೂಡಿದ್ದ. "

"ಅದೆಲ್ಲಾ ಎಯ್ತು; ಈಗಿನ ಹುಡುಗರು ! ಮನೀ ಬೇರೆ ಮಾಡಿ ಕೊಟ್ಟರ ತೀರೇ ಹೊಯ್ತು. ನಾಳೆ ತೋಟದ ಕಡೆಗೆ ಹಾಯ್ದರ ನನ್ನ ಕೇಳು !"

"ಮನಿಯೊಳಗ ಕೂತು ಹೊಟ್ಟೆಗೇನ ಮಾಡತಾರ ? "

"ಬಂದಾನಲ್ಲಾ ನಿನ್ನ ಮಗಾ ಒಬ್ಬ ! ಸೊಸೀ ಏನೂ ಬರೂದಿಲ್ಲ ಬಿಡೋದಿಲ್ಲ. "

"ಮನಿಯೊಳಗs ಇರಲಿ. ಒಂದು ಎಮ್ಮಿ ಸಂಬಾಳಿಸಿದರ ಸಾಕು. ಅವರ ಬಾಗಿಲೊಳಗ ಒಯ್ದು ಕಟ್ಟಿ ಬಿಡತೇನ ಎಮ್ಮಿನ. ಎಲ್ಲಿಯಾದರೂ ದುಡದs ತಿನ್ನೊದ ಅಲ್ಲ ? "

" ನೋಡರಿ; ನಿಮಗ ತಿಳಿದಂತೆ ಮಾಡಿರಿ. ಬೇರೆ ಇಟ್ಟರ, ಅವರೇನೂ ನಮ್ಮ ಹಿಡಿತದೊಳಗ ಉಳಿಯೂದಿಲ್ಲ..."

"ಎರಡೂ ಮನಿಯು ಕಡೆ ನಿನ್ನ ಲಕ್ಷ ಇರಬೇಕಲ್ಲ ಮತ್ತ ! ನಾನೂ ಮಧ್ಯಾಹ್ನ ಅಲ್ಲೇ ಹೋಗಿ ಕೂಡಬೇಕು. ಹೀಂಗs ಏನಾದರೂ ಮಾಡಿ, ಮನೆತನದೊಳಗಿನ ತೊಡಕು ಬಿಡಿಸಿದರ ಆಯ್ತು...."

"ಆ ಮನಿಯೊಳಗ ಇಡುವದಕ್ಕಿಂತಾ ತೋಟದೊಳಗs ಒಯ್ದು ಇಟ್ಟರ ನೆಟ್ಟಗಲ್ಲ ?

ಅಲ್ಲಿಯೂ ಬೇರೆ ಇಬ್ಬರನ್ನು ಇಡತೇನಿ. ಇನ್ನ ಎಲ್ಲಾರೂ ಒತ್ತಟ್ಟಿಗೇ ಇದ್ದೇವು ಅಂದರ ನಡೆಯೋದಿಲ್ಲ ಮನಿತನ. ಹತ್ತು ಮನಿತನ ಕೂಡಿ ಒತ್ತಟ್ಟಿಗೆ ಇದ್ದರ, ವೇಳೆ ಹೊತ್ತಿನೊಳಗ ಉಪಯೋಗ ಆಗ್ತsದಂತ, ನಮ್ಮ ಹಿರಿಯರು ಹಳ್ಳೀ, ಊರೂ ಅಂತ ಕಟ್ಟಿಕೊಂಡರು. ಅದs ಹಳ್ಳಿಯೊಳಗ, ನಾಲ್ಕು ಜನರ ಒಂದು ಸಂಸಾರಾನ ಒಂದಾಗಿ ಇರಲಿಕ್ಕೆ ಕೊಡುವದಿಲ್ಲಾ ಈ ಜನ. ಇಂಥವರೊಳಗ ತಿಳಿಯದ ಹುಡುಗರನ್ನ ಕಟ್ಟಿ

ಕೊಂಡು ಮರ್ಯಾದಿಯಿಂದ ಜಗದೊಳಗ ಬಾಳಬೇಕಾಗೇದ. 'ಈಸಬೇಕು ಇದ್ದು ಜೈಸಬೇಕು' ಅಂತ ದಾಸರ ಹಾಡು ಇಲ್ಲs ? ನಮ್ಮಂಥವರ ಪಾಡ ನೋಡೇ ಹಾಡಿದ್ದದು !

ಮಾತಿನ ಮುಡಿಯೊಡನೆ ನಿಟ್ಟುಸಿರೊಂದು ಕೇಳಬಂದಿತು. ಏನೋ ಮನೆಯ ಹಿರಿಯರು—ಸಿದ್ದಪ್ಪ, ಸಾತವ್ವ,-ಮಾತನಾಡುತ್ತಿದ್ದಾರೆ. ಮನೆತನ ಹೊಳಾಗಿರಬಾರದು, ಹೊಳಾದಂತೆ ಜನರಿಗೂ ಕಂಡಿರಬಾರದು, ಮಕ್ಕಳು ಮಾತ್ರ ಬೇರೆಬೇರೆಯಾಗಿ ನಿಂತು, ಜಗಳವಿಲ್ಲದೆ ಬಾಳಿರಬೇಕು—ಎನ್ನುವ ಯೊಜನೆಯನ್ನು ಹೂಡುತ್ತಲಿದ್ದಾರೆ. ಮಕ್ಕಳಿಗೆ ಹೊಸ ವ್ಯವಸ್ಥೆಗಳನ್ನು ಮಾಡಿ ಕೊಡುವಾಗ, ಹಿರಿಯರಿಗೆ ಇರುಳು ಎರಡು ಹೊಡೆದರೂ ಕಣ್ಣಿಗೆ ನಿದ್ರೆ ಎಲ್ಲಿಂದ ಬಂದೀತು ? 'ಒಂದು ಮನೆತನದ ಹೊಣೆ ಹೊತ್ತ ಹೆತ್ತವರಿಗೇ ಈ ಸಮಸ್ಯೆಯಾದರೆ, ದೇಶದ ಹೊಣೆ ಹೊತ್ತಿರುವ ಹಿರಿಯರ ಗತಿ ಏನು ? ' ಎಂದು ವಿಚಾರಿಸುತ್ತ, ಕತ್ತಲೆಯಲ್ಲಿ ನಾನು ಮುಂದಿನ ಓಣಿಗೆ ಸಾಗಿದೆ. ನಾಯಿಗಳು ದೂರದಲ್ಲಿ ' ಒವ್ ' ಎಂದು ಬೊಗಳುವ ಸದ್ದು ಕೇಳಿಸುತ್ತಿತ್ತು.

೨

ವಾರದಲ್ಲಿ ಒಂದು ದಿನ ನಾನು ಊರಲ್ಲಿ ಕಾವಲಿಗೆ ತಿರುಗಬೇಕಾಗುತ್ತಿತ್ತು. ಈ ವಾರ ಪೇಟೆಯ ಓಣಿಯನ್ನು ಕಾಯುವ ಹೊಣೆಯು ನನ್ನ ಮೇಲೆ ಬಿದ್ದಿತು. ಕೊತವಾಲನ ಆಜ್ಞೆಯಾದತ್ತ ನಾವು ಹೊಗಬೇಕಾಗುವುದು.

ಈಗಾಗಲೇ ಹನ್ನೆರೆಡು ಹೊಡೆದು ಹೊಗಿದ್ದಿತು. ಆದರೂ ಒಂದು ಕಿರುಮನೆಯ ಕಿಟಕಿಯಿಂದ ಬೆಳಕು ಹರಿದು ಹೊರಗೆ ಬರಲು ಯತ್ನಿಸುತ್ತಿದ್ದಿತು. ' ಇಂಥ ಕಂಟ್ರೋಲಿನ ದಿನದಲ್ಲಿ ಇನ್ನೂ ಯಾರು ದೀಪ ಉರಿಸುತ್ತಿದ್ದಾರಪ್ಪ ! ' ಎಂದುಕೊಂಡು, ಆ ಮನೆಯ ಸಮೀಪಕ್ಕೆ ಸಾಗಿದೆ. ಒಳಗೆ ಹೊಸ ದಂಪತಿಗಳ ಸರಸ-ವಿರಸ ಸಾಗಿದೆ.

"ನಾಳೆ ಒಂದು ದಿನ ನೀವು ತೊಟಕ್ಕ ಹೊಗದಿದ್ದರ ನಡಿಯೂದಿಲ್ಲಾ ? "

"ಮನಿಯೊಳಗ ಏನು ಕೆಲಸ ? "

"ಕೆಲಸ ಇದ್ದರನ್ನ ಇರಬೇಕೇನು ?" ಸ್ವಲ್ಪ ತಡೆದು "ದಿನಾ ಬೆಳಗಾದರ ನೀವು ತೊಟದೊಳಗ, ನಾ ಮನಿಯೊಳಗ ! ನನಗ ಹೊತ್ತರೆ ಹ್ಯಾಂಗ ಹೋಗಬೇಕ ? ಎಮ್ಮಿ–ನಾನು, ನಾನು—ಎಮ್ಮಿ ಜೋಡೀ ಆಗಿದೇವಿ...."

"ನೀನೂ ತೊಟಕ್ಕ ಬರತsಇರಲ್ಲ !"

"ನಾ ಮತ್ತ ಅವರೊಳಗs ಬರಲಿ ಏನ ಮೂಗ ಕಿಕ್ಕತ ?"

"ನೀ ಹೀಂಗ ತಿಳಕೊಂಡರ ನಾ ಏನ ಮಾಡಲಿ ?"

"ಒಂದು ದಿನಾ ತೊಟಕ್ಕ ಹೋಗಬೇಕು, ಎರಡು ದಿನಾ ಮನಿಯೊಳಗ ಇರಬೇಕು; ಇರೂದಿಲ್ಲೇನ ಮಂದೀ ಗಂಡಸರೆಲ್ಲಾ....?"

"ತೋಟದ ಕೆಲಸ ಹನ್ನೆರಡು ತಿಂಗಳೂ ಇರತsದ, ಅಣ್ಣಂದಿರೆಲ್ಲಾ ದುಡಿಯುವಾಗ, ನಾ ಮನಿಯೊಳಗ ಹ್ಯಾಂಗ ಕೂಡಲಿ?"

"ಅವರಿಗೆನ ಮನಿಯೊಳಗ ಇರಲಿಕ್ಕೆ ಬ್ಯಾಡಾ ಅಂತೀರೇನು ನೀವು?"

"ಹಾಂಗ ಹ್ಯಾಂಗ ಆದೀತು?"

"ನನಗೇನ ಜೀವ ರಮಿಸೂದಿಲ್ಲ ಹೋಗರಿ!"

ಸ್ವಲ್ಪ ಹೊತ್ತು ನೀರವ, ನಿಶ್ಶಬ್ದ

"ಯಾಕ ಮಾತಾಡವೊಲ್ಲಿರಿ?"

ಸಣ್ಣ ಗೊರಿಕೆಯ ಸದ್ದು,

"ಕಣ್ಣು ಮುಚ್ಚಿದಿರೇನು?"

ಆಂs?"

"ಹಗಲೀ ತೋಟ, ರಾತ್ರೀ ನಿದ್ದಿ...."

"ಇಂದ ಕೆಲಸ ಬಹಳ ಇತ್ತು ತೊಟದೊಳಗ...."

"ಎಂದ ಇರೂದಿಲ್ಲ? ನನ್ನ ನಾಳೆ ತವರು ಮನೆಗೆ ಕಳಿಸಿ, ನೀವು ತೊಟದೊಳಗs ಇರು ಹೋಗರಿ!"

"ಯಾಕ?"

"ಎಷ್ಟ ಸಾರೆ ಹೇಳಲಿ, 'ನನಗ ಹೊತ್ತs ಹೊಗದು' ಅಂತ..."

"ಮಧ್ಯಾನ್ನ ಅಪ್ಪನ ಹತ್ತರ ಹೋಗಿ ಕೂಡಬೇಕು...."

"ನೀವು ನೀವು ತೊಟದೊಳಗs...."

ಈ ದಂಪತಿಗಳ ತೊಡಕನ್ನು ಬಿಡಿಸುವುದು ನನ್ನಂಥವನಿಗಂತೂ ಸಾಧ್ಯವಿಲ್ಲವೆಂದು ತೋರಿತು. ಬಾಬುರಾಜನೊಡನೆ ಬೇರೆ ಮನೆಯಲ್ಲಿ ನಿಂತು ಸುಖವಾಗಿ ಬಾಳಬಯಸಿದ ಕುಸುಮಳ ಮುಗ್ಧಜೀವ, ಈಗ ಮತ್ತೆ ಪತಿಯ ಸತತ ಸಹವಾಸಕ್ಕಾಗಿ ಕಾತರಿಸುತ್ತಿದೆ. ನಾಲ್ಕು ಜನ ರೊಡನೆ ಇದ್ದಾಗ ಸಿಕ್ಕದ ಸುಖ, ಒಬ್ಬಳೇ ಇದ್ದರೂ ದೊರಕದಾಗಿದೆ. ಪತಿಯ ಜೊತೆಯಲ್ಲಿ ದುಡಿಯುವ ವಿಚಾರಕ್ಕೆ ಅವಳ ಮನಸ್ಸು ಒಪ್ಪದಾಗಿದೆ. ತನ್ನೊಡನೆ ಪತಿಯೂ ಕೆಲಸವಿಲ್ಲದೆ ಕಾಲಕಳೆಯಲಿ—ಎನ್ನುವ ಬಯಕೆಯೇ ಪ್ರಬಲವಾಗಿದೆ. ಬಾಬುರಾಜನು ಅಣ್ಣಂದಿರೊಡನೆ ಅಡವಿಯಲ್ಲಿ ದುಡಿಯದೆ ಬದುಕಲಾರ. ಎಂದ ಮೇಲೆ, ಈ ತೊಡಕು ಬಿಡುವುದೆಂತು?

ದೇಶದ ಬಾಳಿನಲ್ಲೂ ಅನೇಕ ತೊಡಕುಗಳುಂಟು. ನಾಡು ಹೋಳಾಯಿತು. ಹೋಳಾಗಿಯೂ ಸುಖದಲ್ಲಿ ಬಾಳದಾಯಿತು. ಬೇರೆಯಾಗಿ ನಿಂತು ಸುಖ ಪಡೆಯುವೆವೆನ್ನುವ ಪಾಕಿಸ್ತಾನಿಗಳು, ತಿರುಗಿ ಹಿಂದುಸ್ತಾನದ ರಾಜಕೀಯರಂಗದಲ್ಲಿ ಕೈಹಾಕುವರು. ಒಳ್ಳೆಯ ರೀತಿಯಿಂದ ಬಾಳಬೇಕೆನ್ನುವ ದೇಶಕ್ಕೂ ಅಡ್ಡಿಯನ್ನು ಒಡ್ಡುವರು. ದೇಶದ ಮುಂದಿರುವ ಇಂಥ ಸಮಸ್ಯೆಗಳನ್ನೇ ಇಲ್ಲಿ ಮನೆ-ಮನೆಯಲ್ಲಿಯೂ ಕಾಣುತ್ತೇವಲ್ಲ!

ಒಂದಾಗಿ ಬಾಳುವ ಭಾರತೀಯ ಸಂಸ್ಕೃತಿಯೆ ನಷ್ಟವಾಯಿತೆ? ಪ್ರಶ್ನೆ ಪ್ರಶ್ನೆಯಾಗಿಯೇ ನನ್ನ ಮುಂದೆ ಉಳಿಯಿತು. ಮೆಲ್ಲನೆ ಅಲ್ಲಿಂದ ನಡೆದೆ. ನನ್ನ ಹೆಜ್ಜೆಯ ಸದ್ದಿಗೆ ಕೈಯೊಳಗಿನ ಬಡಿಗೆಯ ಸಪ್ಪಳ ತಾಳ ಹಾಕುತ್ತಲಿತ್ತು. ಕತ್ತಲೆಯಲ್ಲಿ ಎಡವಿ ಮುಗ್ಗರಿಸಿದಾಗ ಆ ತಾಳ ತಪ್ಪುವುದು ಏಳುತ್ತ ಕತ್ತಲೆಯ ದಾರಿಯಲ್ಲಿ ಮುಂದೆ ಸಾಗಿದೆ.

೩

"ಯಾಕ, ಸಿಟ್ಟೇನ ನನ್ನ ಮ್ಯಾಲ?"

"ಸಿಟ್ಟುಮಾಡಲಿಕ್ಕೆ ನನ್ನದೇನು ಅಧಿಕಾರ ನಡೀತದ ನಿಮ್ಮ ಮ್ಯಾಲ?"

"ನಿನ್ನಮ್ಯಾಲ ನಂದು, ನನ್ನಮ್ಯಾಲ ನಿಂದು ಅಧಿಕಾರ ನಡದs

ನಡೀತsದ. ಎಂದ ಮನಿವಿ ಆಗಿದೇನೋ ಅಂದೇ ಆ ಅಧಿಕಾರ ಇಬ್ಬರಿಗೂ ಬಂದsದ."

"ಸಿಮಗಷ್ಟs ಬಂದsದ, ಸಿಕ್ಕಿಗಿಕ್ಕಾಗ ಮನಿಗೆ ಬರಲಿಕ್ಕೆ! ಸಣ್ಣವರಾಗಿ ನೋಡರಿ....ಅವರು ಪೇಟಿಯೊಳಗಿನ ಮನಿ ಹಿಡದಕೊಂಡು ಕೂತರು! ಹತ್ತೆಂಟು ವರ್ಷ ಜನ್ಮಾ ಮಾಡಿದೆವು; ಇನ್ನೂ ನಮಗ ಸ್ವತಂತ್ರ ಹಾಸಿಗಿ-ಹೊದಿಕಿನೂ ಇಲ್ಲ. ನಿವೂ ಒಬ್ಬರು ಗಂಡಸರs!"

"ಇಲ್ಲs; ತೋಟದೊಳಗ ಗುಡಿಸಲಾ ಕಟ್ಟಿ ಆಯಿತಂದರ ಹೋಗೋಣಲ್ಲ, ಅಲ್ಲೇ ಇರಲಿಕ್ಕೆ."

"ನಾವ್ಯಾಕ ಗುಡಿಸಲಿನೊಳಗ ಇರಬೇಕು?"

"ಉಳಿದವರು ಹೋಗಲಿ; ನಾವು ಮನಿಯೊಳಗ ಇರೋಣಬಾ."

"ಮುದುಕಿಯೊಬ್ಬಾಕಿ ಇರುವಾಕೇ ಅಲ್ಲಾ, ನಮ್ಮ ಸುತ್ತs."

"ಊರೊಳಗs ಸಣ್ಣ ಮಗನ ಮನೀ ಅದ. ಅಲ್ಲ್ಯಾ ಹೋಗ್ತಾಳ ಇಲ್ಲ್ಯಾ ಇರತಾಳು. ಆಕೇದು ಏನ ಹೇಳತಿ?"

"ಆ ಕಟಿಕಟಿ ನನ್ನಿಂದ ತಾಳೋದs ಆಗದು."

"ಈಗೇಕ ಬ್ಯಾರೇನs ಆಗಲಿಕ್ಕೆ ನಿಂತೇವೇನ ಇಷ್ಟೆಲ್ಲಾ ವಿಚಾರ ಮಾಡಲಿಕ್ಕೆ? ನಮ್ಮ ಅವ್ವ ಅಪ್ಪ ಇರುವ ತನಕಾ ಇಂಥಾದ ಏನೂ ನಡೆಯೂದಿಲ್ಲ ನೋಡು ಎಲ್ಲಾದರೂ ನಾಲ್ಕು ರೊಟ್ಟೀಸುಟ್ಟು ತಿನ್ನೋದು ಅವ; ಮುಡಿಯೋದು ಅದ. ಈsಗ ಒಂದೆರಡು ವರ್ಷದೊಳಗ ನಮ್ಮ ಮನಿತನಾ ಒಂದು ರಾಪಕ್ಕ ಬಂದsದ. ನಮ್ಮ ಮನಿತನದ ಸ್ಥಿತಿಗತಿ ನೋಡೋದು ಬಿಟ್ಟು, ನಮ್ಮ ನಮ್ಮ ಸುಖಾನs ನೋಡಿದರ ಹ್ಯಾಂಗ? ಅಪ್ಪ ಎಲ್ಲಿ ಇರೂ ಅಂತ ಹೇಳತಾನು ಅಲ್ಲಿ ಇರತೇನ ನಾ. ಅಂವ ಮನಿತನದ ಸಲುವಾಗಿ ಏನ ಮಾಡ ಅನ್ನತಾನು ಅದನ್ನ ಮಾಡತೇನು. ನಾವs ನಾಲ್ಕು ಮಂದಿ ಅಡ್ಡಾತಿಡ್ಡಾ ನಡದ ಮ್ಯಾಲ, ಹಿರೇರ ಆಗಿ ಅವರೇನು ಮಾಡತಾರು? ನಿನ್ನ ಮಾತ ಕೇಳಿ ನಾನೂ ಇನ್ನ ಜಗಳಾ ಹೂಡಲಿ? ಅಪ್ಪನಿಗೆ ಎಲ್ಲಾ ತಿಳಿತsದ. ತಿಂಗಳೊಪ್ಪತ್ತಿನೊಳಗs ಎಲ್ಲರಿಗೂ ವ್ಯವಸ್ಥಾ ಮಾಡಿಕೊಡತಾನ."

"ನಿಮ್ಮ ಹಿಡಿದವರs ಹೇಳಿದ್ಹಂಗ ಕೇಳ್ತ ಇರೋದು ಆದರ, ನನ್ನ ಯಾಕ ಮದಿವೀ ಮಾಡಿಕೋಬೇಕು ? "

"ಯಾಕs ಮೈ ಗುದು ಗುದು ಅನ್ನಲಿಕ್ಕೆ ಹತ್ತೇದ ಏನ ? "

ಈ ಸಂವಾದವನ್ನು ಕೇಳಿದಾಗ, ನನ್ನ ಕಣ್ಣೆದುರಿಗೆ ಕುಸುಮಾ-ಬಾಬುರಾಜರ ಚಿತ್ರ ಸುಳಿಯಿತು. ಕಳೆದ ಕೆಲವು ವಾರಗಳ ಹಿಂದೆ ಅವರ ಮಾತು-ಕತೆಗಳೂ ಕಿವಿಯ ಮೇಲೆ ಬಿದ್ದಿದ್ದುವು. ಇದು ಅಣ್ಣನ ದಾಂಪತ್ಯಜೀವನ, ಅದು ತಮ್ಮನ ದಾಂಪತ್ಯಜೀವನ ! ಎರಡರಲ್ಲೂ ನೆಲ-ಮುಗಿಲುಗಳಷ್ಟು ಅಂತರ. ಆದರೂ ಎರಡೂ ಜೋಡಿಗಳ ಎದುರಿಗೆ ಇರುವ ಸಮಸ್ಯೆ ಮಾತ್ರ ಒಂದೇ ಆಗಿದೆ. ಯಾರು ಯಾರ ವಲವಿನಂತೆ ಬಾಳಬೇಕು ? ಸತಿಯು ಪತಿಯೇ ಪರದೈವವೆನ್ನಬೇಕೋ ! ಪತಿಯು ಸತಿಯೇ ಪರದೈವವೆಂದು ಬಾಳಬೇಕೋ ? ಇಬ್ಬರೂ ನಡುವಿನ ದಾರಿಯೊಂದನ್ನು ಹಿಡಿದರೆ ಸಂಸಾರ ಸುಖಕರವಾದೀತಲ್ಲ !

ಇದೇ ವಿಚಾರದ ಗಾಳಿಯಲ್ಲಿ ಸಿಕ್ಕು, ಅದಾವಾಗಲೋ ನಾನು ಪೇಟೆಯ ಓಣಿಗೆ ಬಂದಿದ್ದೆ. ಅಲ್ಲಿ ಕುಸುಮಳ ಮಾತನ್ನು ಕೇಳಿ ತಡೆದು ನಿಲ್ಲುವಂತಾಯಿತು. ಮುಂದಿನ ಮಾತುಗಳನ್ನು ಕೇಳಿಯೇ ಹೋಗಬೇಕೆಂದು ಕುತೂಹಲ ಕೆರಳಿತು. ಮತ್ತೆರಡು ಹೆಜ್ಜೆ ಮುಂದೆ ಹೋಗಿ ಕಿವಿಗೊಟ್ಟು ಕೇಳತೊಡಗಿದೆ :

"ಎಷ್ಟು ಆದರೂ ಆ ಅಂಗಡೀ ರಾಮುನಕಿಂತ ಈ ದೀಪಚಂದ ಸಾವುಕಾರ ಒಳ್ಳೆಯವ ನೋಡಿರಿ ! "

"ರಾಮುಪ್ಪಗ ವ್ಯಾಪಾರ ಮಾಡಿ ಏನು ಗೊತ್ತು ? ದೀಪಚಂದ ಸಾವುಕಾರ ಅದರೊಳಗ ನುರಿತವ...."

"ಮೊನ್ನೆ ರಾಮೂನಲ್ಲೆ ಎರಡು ದುಡ್ಡಿನ ಜೀರಿಗೀ ತಂದರ, ನಾಲ್ಕs ಕಾಳ ಕೊಟ್ಟ. ಇಂದ ದೀಪಚಂದರ ಅಂಗಡಿಗೆ ಹೋದರ, ಒಂದು ದುಡ್ಡಿಗೇ ಅದಕ್ಕಿಂತಾ ಹೆಚ್ಚಿಗೆ ಕೊಟ್ಟರು ! ಎಲ್ಲಾ ಗಿರಾಕೀ ಬಿಟ್ಟು, ನನ್ನ ನೋಡಿದ ಕೂಡಲೆ, ಮೊದಲ 'ಏನ ಬೇಕು ?' ಅಂತ ಕೇಳತಾರ. ಮನಿಯೊಳಗ ನೀವು ಇರುವದಿಲ್ಲ. ಅದಕ್ಕ ನಾನs ಅಂಗಡಿಗೆ ಹೋಗಬೇಕಾಗ್ತದ ಅಂಬೂದೆಲ್ಲ ಅವರಿಗೆ ಗೊತ್ತ ನೋಡರಿ !"

ಮುಂದೆ ಬಾಬುರಾಜನ ಬಾಯಿಂದ ಮಾತುಗಳೇನೂ ಹೊರಡಲಿಲ್ಲ. ಹಗಲೆಲ್ಲ ಹೊಲದಲ್ಲಿ ದುಡಿದ ಅವನಿಗೆ ನಿದ್ರೆ ಆವರಿಸಿರಬೇಕು. ಕುಸುಮಳೂ ಸುಮ್ಮನಾದಳು.

ಸ್ವಲ್ಪ ಹೊತ್ತಿನ ಮೇಲೆ 'ಉಫ್' ಎಂದು ಊದಿದ ಸದ್ದೊಂದು ಕೇಳಬಂತು, ದೀಪ ಆರಿತು. ಆ ಕಿರುಮನೆಯ ಕಿಟಕಿಯೊಳಗಿಂದ ಕತ್ತಲೆಯು ಹರಿದು ಬಂದು, ಹೊರಗಿನ ಕತ್ತಲೆಯೊಡನೆ ಸೇರಿ ಒಂದಾಯಿತು !

೪

ಕೆಲವು ದಿನಗಳು ಉರುಳಿದವು. ಈಗ ನಮ್ಮೂರಿಗೆ ಕಳ್ಳರ ಕಾಟವಿಲ್ಲ. ಗ್ರಾಮಸಂರಕ್ಷಕ ದಳದ ಫಲವಿದು. ಊರ ಜನರೆಲ್ಲ ಚಿಂತೆಯಿಲ್ಲದೆ ನಿದ್ರೆ ಮಾಡುತ್ತಿರುವರು. ಆದರೂ ನಮ್ಮ ಕಾರ್ಯವನ್ನು ನಾವು ನಿಲ್ಲಿಸಿಲ್ಲ. ಹಾಗೇ ಊರಲ್ಲಿ ಇರುಳು ತಿರುಗುವೆವು.

ಇಂದು ಹುಣ್ಣಿವೆ. ಎಲ್ಲೆಡೆಗೂ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು. ಸ್ವಲ್ಪ ತಡಮಾಡಿ, ಒಂದು ಸುತ್ತು ಊರಲ್ಲಿ ತಿರುಗಿ ಬಂದರಾಯಿತೆಂದು ಯೋಚಿಸಿ, ಒಂದು ಗಂಟೆಯಾದ ಮೇಲೆ ಚಾವಡಿಯಿಂದ ಹೊರಟೆವು.

ಒಬ್ಬೊಬ್ಬರು ಒಂದೊಂದು ಓಣಿಯನ್ನು ಸೇರಿದೆವು.

ಆ ದಿನ ನಾನು ಕೇಳಿದ ಮಾತುಗಳಿವು;

"ಮೂರೂ ಮಂದಿ ಸೊಸೊಂದಿರಕ್ಕಿಂತಾ ಕುಸುಮಾನ ೖಯ ಅಡಿಗೆಗೆ ಸ್ವಾದ ಹೆಚ್ಚ ನೋಡು!"

ಸಿದ್ದ ಹೆಂಡತಿಗೆ ಹೇಳಿದ.

"ಹೂಂ! ಅಂತಾ ಸಾಮಾನ ಹಾಕ್ತಾಳು, ಆಗದ ಏನಮಾತ್ತಕದ?"

"ಇಲ್ಲಾ; ಅಡಗಿ ಮಾಡುವ ಹದಾ ಸಿಕ್ಕೇದ ಏಳ ಪೋರಿಗೆ...."

"ಹೋದಾಗ ಸವಿ ಸವಿ ಇಷ್ಟ ತಿನಲಿಕ್ಕೆ ಮಾಡಿ ಹಾಕ್ತಾಳ ಕಾಣ್ತಾದ, ಹೊಗಳ್ತೀ ಆಯ್ತು ಸಣ್ಣ ಸೊಸಿನ್ನ. ಅದೂ ತಿಳಿಯೂದಿಲ್ಲ, ಇದೂ ತಿಳಿಯೂದಿಲ್ಲ...."

" ತಿಳದಾಕಿ ಬಹಾಳ ನೀ! ನೋಡು ಹೋಗಿ ಆಕೆಯ ಮನಿ ಎಷ್ಟು ಶಿಸ್ತ ಅದ. ಈ ತಿಂಗಳದೊಳಗ ಅತ್ತ ಹೋಗೀದಿ ಏನ ನೀ?" ಮತ್ತೂ ಸಿದ್ಧ ಸೊಸೆಯನ್ನು ಹೊಗಳಿದ.

" ನಾ ಯಾತಕ್ಕ ಹೋಗಲಿಕ್ಕೆ ಹೋಗಲಿ? ನಮ್ಮಂಥ ಮುದಿ ಕೇರು ಅವರಿಗೆ ಕಾಲ್ತೊಡಕ ಆಗ್ತೇವಿ " ತುಸು ತಡೆದು " ಕಸಬಿಣೇರ ಮನೀ ಹಾಂಗ ಎದುರಿಗೆ ಕನ್ನಡೀ ಏನ ಹಚ್ಚಿದಾಳ, ತಿದ್ದಿ ತೀಡಿ ಕೂದಲಾ ಏನ ಹಿಕ್ಕತಾಳ! ಹಣೀ ಮ್ಯಾಲಿನ ಕುಂಕುಮ ಅಂತ, ನನ್ನ ಮುಂದ ದಿಟ್ಟಗಿ ಕಾಣೂದs ಇಲ್ಲಂತ. ನಾ ಯಾತಕ್ನ ಇದನ್ನೆಲ್ಲಾ ನೋಡ್ಲಾಕ ಹೋಗ್ಲಿ? ನೆರಿಮನಿಯವರು ಬಂದು ಹೇಳೋದ್ನs ಕೇಳ ತೇನು ... ಈಗ ನಿನ್ನ ಮನೀ ಕಾರಬಾರ ಎಲ್ಲಾ ದೀಪಚಂದ ಸಾವುಕಾರ ಮಾಡುವವ ಆಗಿದಾನ. ಮೊನ್ನೆ ರಾತ್ರಿ ನಮ್ಮ ಬಾಬೂನ ಕರಕೊಂಡ, ಯಾವ ಊರಿಗೋ ಸಿನಿಮಾಕ್ಕ ಹೋಗಿದ್ದಂತ. ಸಾವಕಾರ್‍ರ ವ್ಯೆತ ರಕಿ ಆದ ಮ್ಯಾಲ, ಅವರಿಗೆ ಯಾವ ಕೊರತಿ? ಅವರ ಮನಿಗೆ ಇವರು ಹೋಗತಾರ, ಇವರ ಮನಿಗೆ ಅವರು ಬರತಾರ........ ನಿನ್ನ ಸೊಸೀ ಚೊಚ್ಚಿಲ ಬಸಿರು ಇದ್ದಾಳಂತ; ಸಾವಕಾರ ಮನ್ಯಾವರು ಊಟಕ್ಕ ಮಾಡುವರು ಇದ್ದಾರಂತ!"

" ನಿನ್ನ ಸೊಸೇದ ನೆಟ್ಟಗ ಆದರ ನಿನಗೇನ ಕೆಟ್ಟೇನು ? "

" ನೆಟ್ಟಗs ಆಗೋದಿದ್ದರ ಚಲೋನs ಆಯ್ತಲ್ಲ! ಹಾದಿ ಬೀದಿಯೊಳಗೆ ಗಂಡಸು ಆಗಿ:ಹೆಂಗಸರನ್ನ ಏನ ಮಾತಾಡಿಸೋದ ಆದು?"

" ಯಾರು?"

" ನಿನ್ನ ಸೊಸೀನs ಮಾತಾಡಸತಾನ ದೀಪಚಂದ ಸಾವಕಾರ.... ತಿಳಿತೂ ? ವ್ಯೆತರಕಿ ಇದ್ದರ ಗಂಡಸರ ಪೂರ್ತಿ ಇರಬೇಕು. ಅದೂ ಹೊರಗಿನ ಹೊರಗs.... ಮನಿಯೊಳಗ ಉಪಯೋಗ ಇಲ್ಲ.... ನಿನ್ನ ಮಗಾ ಆದರೂ ಏನ ? ಸಾವಕಾರನ್ನ ಕರದು ಮನ್ಯಾಗ ಚಹಾ ಕುಡಿ ಸೋದೇನ, ನಗೋದೇನ ಕೆಲಿಯೋದೇನ. ಎಲ್ಲಾ ನಿಮಗs ಚಂದ ಕಾಣ್ತದ. ಮತ್ತ ಅನ್ನುವವರ ನಾವs ಕೆಟ್ಟ....

" ಕೂಡಿ ಸಾಲೀ ಕಲಿತವರು, ಈಗಿನ ಹುಡುಗರು.... ಅರವದು

ಬ್ಯಾರೇನs ಆಗ್ತದ. ನಮ್ಮದು ಬ್ಯಾರೆ ಇತ್ತು. ನಮ್ಮಂತನs ಇರೂ ಅಂದರ ಇರೂದಿಲ್ಲ ಅವರು....ಅದೆಲ್ಲಾ ಮಾಡಿಕೊಂಡು, ತೋಟದೊಳಗ ಬಂದ ಕೆಲಸಾನೂ ಮಾಡತಾನೋ ಇಲ್ಲೋ? ಸಾಕು! ಹ್ಯಾಂಗ ಯಾಕ ಇರವೊಲ್ಲರವರು!''

"ನಮ್ಮ ಹುಡುಗ ಮಳ್ಳ; ನಾಲ್ಕು ಮಂದಿ ಕೂಡಿ ನಮ್ಮ ತಲಿಗೆ ಏನಾದರೂ ತಂದಾರೂ ಅನ್ನತೇನೂ. ಅಬರೂ ಅನ್ನೋದು ಎಷ್ಟ ಇರತದ ?''

"ಹಾಗೇನ ಅಗ್ತದ ಬಿಡು !''

"ಆದವ್ಯಾಲs ನೀವೆಲ್ಲಾ ಜೀವಾ ಕೊಡಲಿಕ್ಕೆ ಓಡಾಡುವವರು. ಮೊದಲs ಎಚ್ಚರಕಿಯಿಂದ ಇದ್ದರ ಹ್ಯಾಂಗ?''

"ಈಗ ಏನ ಆಗೇದ? ಅವರವರು ಶಿಸ್ತs ಇದ್ದಾರ. ಹಿಂಗs ಇರುವಾಗ ದೇವರು ನಮ್ಮ ಕಣ್ಣ ಮುಚ್ಚಿದರ ಆಯ್ತು. ಬರುವಾಗ ಸಂಗಡ ಏನ ತಂದಿಲ್ಲ, ಹೋಗುವಾಗ ಏನ ಒಯ್ಯೊದಿಲ್ಲ. ನೀನs ಒಯ್ಯುವಾಕಿ ಇದ್ದರ ಏನೋ ಮತ್ತ !"

"ನಾನs ನಾಡಹೊರತ ಆಗೇನಿ, ನಿಮ್ಮೆಲ್ಲರಿಗೂ!"

"ಸಾಕು, ಮಲಗಿನ್ನ; ಮೂಡಲ ಹರೀತs ಬಂತು.''

ಸಿದ್ದಪ್ಪ ಸಾತವ್ವನಿಗೆ ಕಣ್ಣು ಮುಚ್ಚಲಿಕ್ಕೆ ಹೇಳಿದ. ತಾನೂ ಕಣ್ಣು ಮುಚ್ಚಿದ.

ಊರು ಕಾಯುವ ಹೊಣೆ ಹೊತ್ತ ನನಗೆಲ್ಲಿ ನಿದ್ರೆ ? ಬೆಳದಿಂಗಳಲ್ಲಿ ಮುಂದೆ ಸಾಗಿದೆ. ಹಾಗೆಯೇ ನನ್ನ ಮನಸ್ಸು— ಅಂದಿನ ಕುಸುಮಳ ಮಾತು, ಇಂದಿನ ಸಾತವ್ವನ ಮಾತಿನ ಹಿಂದಿರುವ ಭಾವಗಳನ್ನು ಹೊಂದಿಸಿಟ್ಟು, ಏನೇನೋ ಕಲ್ಪಿಸಹತ್ತಿತು.

ಸುತ್ತಲೂ ಬೆಳದಿಂಗಳು ಬೆಳ್ಳಗೆ ಬಿದ್ದಿತ್ತು ! ಬಹುದೂರದಲ್ಲಿ ಆಕಾಶದಲ್ಲೊಂದು ಕಪ್ಪು ಮೋಡ ಬೆಳೆದು ದೊಡ್ಡದಾಗುತ್ತಲಿತ್ತು!

೨೩

ನಾಲ್ಕೆಂಟು ತಿಂಗಳುಗಳು ಜಾರಿದುವು. ಸುಗ್ಗಿಯ ಸಮಯ ಬಂತು. ಈಗ ಹಗಲು ಹೊತ್ತಿನಲ್ಲೂ ಊರಲ್ಲಿ ಜನ ಇರದು. ಅದರಿಂದ

ಹಗಲಿರುಳೂ ಊರ ಕಡೆಗೆ ನಾವು ಲಕ್ಷ್ಯ ಹಾಕಬೇಕಾಯಿತು ಈಗೀಗ ಹೊರಗಿನ ಕಳ್ಳರಿಗಿಂತ ಊರೊಳಗಿನ ಕಳ್ಳರ ಕಾಟವೇ ಹೆಚ್ಚಾಗಿದ್ದಿತು. ನೆರೆಮನೆಯ ಕಳ್ಳನನ್ನು ಹಿಡಿಯುವುದು— ತಡೆಯುವುದು— ಬಹಳ ಕಷ್ಟಕರ. ಹಗಲಿನಲ್ಲಿಯೂ ಚಿಕ್ಕ ಪುಟ್ಟ ಕಳವುಗಳಿಗೆ ಆರಂಭವಾಗಿದ್ದಿತು. ಅದಕ್ಕಾಗಿ ಗ್ರಾಮ ಸಂರಕ್ಷಕ ದಳದವರು, ಇಳಿಹೊತ್ತಿನಲ್ಲಿಯೂ ಒಮ್ಮೊಮ್ಮೆ ಊರಲ್ಲಿ ಸುತ್ತಾಡಿ ಬರಬೇಕಾಗುತ್ತಿದ್ದಿತು. ಸಣ್ಣ ಸಣ್ಣ ಓಣಿಗಳಲ್ಲಿಯೇ ಹೆಚ್ಚಾಗಿ ಹಾಯಬೇಕಾಗುತ್ತಿದ್ದಿತು. ಕಳವುಗಳಾಗುವುದು ಅಲ್ಲಿಯೇ ಹೆಚ್ಚು.

ಇಂದು ಮಧ್ಯಾಹ್ನದ ಮೂರು ಗಂಟೆಗೆ ಊರೆಲ್ಲ ತಿರುಗಿ ಪೇಟೆಯ ಓಣಿಗೆ ಬಂದೆ. ಬಾಬುರಾಜನ ಮನೆಯಲ್ಲಿ ನಾಲ್ಕು ಮನೆಯ ಜನರು ಕೂಡಿದಂತೆ ಕಂಡಿತು. ಅಲ್ಲಿಯೇ ಹೋಗುತ್ತಿರುವ ದೀಪಚಂದ ನನ್ನನ್ನು ಕರೆದ. ಅವನ ಕೈಯಲ್ಲಿ 'ರಾಣೀ ಛಾಪಿ'ನ ಚಹದ ಪುಡಿಯೊಂದಿತ್ತು. ನನಗೂ ಚಹದ ಆಶೆಯಾಯಿತು. ಹಿಂಬಾಲಿಸಿದೆ.

ಪಡಸಾಲೆಯಲ್ಲಿ ಕಂಬಳಿ ಹಾಸಿತ್ತು. ಅದರ ಮೇಲೆ ಸಿದ್ದಪ್ಪ ಕುಳಿತಿದ್ದ- ನೆರೆಮನೆಯ ಹೆಂಗಸರೂ ಇದ್ದರು. ಒಳಗೆ ಕುಸುಮಳ ತವರು ಮನೆಯ ಹೆಂಗಸರಿರಬೇಕು. ಅವರು ತಮ್ಮತಮ್ಮಲ್ಲಿ ಸಾವಕಾಶವಾಗಿ ನಗುತ್ತಿದ್ದರು, ಮಾತಾಡುತ್ತಿದ್ದರು. ಕುಸುಮಾ ತನ್ನವರಿಗೆ ಹೇಳುತ್ತಿದ್ದಳು.

"ವೇಳೆ ಹೊತ್ತಿನೊಳಗ ಆಗುವವರೆಂದರೆ ಇವರೊಬ್ಬರs ತಾಯಿಾ ಊರಾಗ. ಇಷ್ಟ ಸಾವಕಾರಕಿ ಇದ್ದರೂ ಎಳ್ಳಷ್ಟು ಗರ್ವಿಕೆ ಇಲ್ಲ ನೋಡು. ಒಮ್ಮೊಮ್ಮೆ ಅಂಗಡಿಯಿಂದ ಸಾಮಾನೂ ಮನಿಗೆ ತಂದು ಮುಟ್ಟಿಸತಾರ."

"ಸಿದ್ದಪ್ಪನ ಸ್ವಾರಿ, ಯಾಕೋ ಊರ ಕಡೆ ಬಂದದ್ದಲ್ಲ?" ಎಂದು ಕೇಳುತ್ತ ನಾನು ಕಂಬಳಿಯ ಮೇಲೆ ಹೋಗಿ ಕುಳಿತೆ.

"ಮೊಮ್ಮಗನ್ನ ನೋಡಿ ಹೋಗಬೇಕಂತ ಬಂದಾನ. ಇಲ್ಲಾದರ ಅವನಿಗೆಲ್ಲಿ ಸವಡು ?"

" ಅದs ಅಂತೇನಿ."

" ಎಲ್ಲಾ ಅಡವೀ ಜನಾ ಇದು. ಊರಂದರ ಇವರಿಗೆ ಬೇಸರು ನೋಡು. ಬಾಬೂನೂ ಹಿಂಗs! ತನ್ನ ತೋಟ ಆಯ್ತು, ತಾ ಆಯ್ತು. ಮನಿಯ ಕಡೆಗೆ ವ್ಯವಸ್ಥಾ ನೋಡೋದs ಇಲ್ಲಂದರ ಏನದು? ಇಷ್ಟ ಗಳಿಸಿ ಎಲ್ಲಿ ಇಡತಾರ ಅಂತೇನಿ ನಾ·" ಅಧ್ಯಕ್ಷತೆಯಿಂದ ದೀಪ ಚಂದ ಹೇಳತೊಡಗಿದ.

" ಹಗಲೀ ರಾತ್ರಿ ದುಡದರೂ ಹೊಟ್ಟಿ ತುಂಬವೊಲ್ದು. ಗಳಿಸೋದ ಹೇಳತಾನ ಸಾವುಕಾರ!" ಸಿದ್ದಪ್ಪ ಕೆಮ್ಮುತ್ತ ನುಡಿದ.

ಇಷ್ಟರಲ್ಲಿ ಒಳಗಿನಿಂದ ಚಹ ತಂದು ಬಾಬುರಾಜ ಕೊಟ್ಟ. ಎಲ್ಲರೂ ಕುಡಿದೆವು. ಜೊತೆಗೆ ಕುಸುಮಾ ತನ್ನ ಮಗನನ್ನು ತಂದು ಮಾವನ ತೊಡೆಯ ಮೇಲೆ ಹಾಕಿ ಹೋದಳು.

" ಹಿಂದ ತೊಟ್ಟಿಲೊಳಗ ಹಾಕುವ ದಿನ ನೋಡಿದ್ದೆ; ಕತ್ತಲಿಯೊಳಗ ನೆಟ್ಟಗೆ ಕಾಣಿಸಿರಲ್ಲಿಲ್ಲ."

ಸಿದ್ದ ಮೊಮ್ಮಗನ ಮುಖವನ್ನು ನೋಡುತ್ತ ಹೇಳಿದ.

" ಇಂದ್ರsರ ಬೆಳಕಿನೊಳಗ ನೋಡಲ್ಲ!"

ನೆರೆಮನೆಯುವಳೊಬ್ಬಳು ಅಂದಳು.

" ಸಣ್ಣ ಮಗಾ ಸಣ್ಣ ಮಗಾ ಅಂತಿದ್ದಿ. ಅವನ ಜನ್ಮಾನೂ ದಂಡಿಗೆ ಹಚ್ಚಿದಿಲ್ಲೋ? ಇನ್ನ ನೀ ಸಾಯಲಿಕ್ಕೇನೂ ಹರಕತ್ತ ಇಲ್ಲ ಸಿದ್ದಪ್ಪಾ!"

ಇನ್ನೊಬ್ಬ ಮುದುಕಿಯ ಪ್ರಮಾಣ ಪತ್ರವಿದು.

" ಮೊಮ್ಮಗ ಹುಟ್ಟಿದ ಕೂಡಲೆ ಕೊಲ್ಲಲಿಕ್ಕೇ ನಿಂತೆಲ್ಲ ನೀ?" ದೀಪಚಂದ ನಡುವೇ ಮಾತು ಸೇರಿಸಿದ.

" ಕೂಸನ್ನ ಮೊದಲ ನೋಡತೀರೋ, ಏನ ಮಾತಾಡತೀರ್ಯೋ? ಯಾವುದರೇ ಒಂದು ಮಾಡಿರಿ ಮೊದಲ!"

ಕುಸುಮಳ ತಾಯಿ ಒಳಗಿನಿಂದ ಸ್ವಲ್ಪ ಬಿರುಸಾಗಿ ನುಡಿದಳು
" ನೋಡಿ ಅಯ್ತಲ್ಲ!"

ಸಿದ್ದಪ್ಪ ಎರಡೇ ಶಬ್ದ ಉಚ್ಚರಿಸಿದ ದೀಪಚಂದನ ಮುಖದ ಕಡೆಗೊಮ್ಮೆ, ಕೂಸಿನ ಮುಖದ ಕಡೆಗೊಮ್ಮೆ ನೋಡಿದ.

" ಅವ್ವಾ-ಅಪ್ಪನನ್ನೇನ ಹೊತ್ತಿಲ್ಲಪ್ಪಾ ಹುಡುಗ!" ಒಬ್ಬಳ ಅಂದಳು.

" ಇವರ ಮನಿತನದೊಳಗ ಯಾರ ಮುಖವನ್ನೂ ತರಲಿಲ್ಲ ಹುಡುಗ."

" ಎಲ್ಲೀದೋ ಹೊಸ ಮುಖಾನs ಹೊತ್ತಾನ."

" ಯಾರ ಮೊಕಾ ಯಾಕ ತರವಲ್ದು, ಚೆಲುವ ಆದ ಇಲ್ಲೋ ಹುಡುಗ ? ಸಾಕು. ಎಂಥಾದರ ಮಂಗ್ಯಾನ ಮೋತೀದು ಹುಟ್ಟಿದ್ದರ ಏನು ಮಾಡೋದು ತಾಯಿ ! "

ಒಬ್ಬೊಬ್ಬರು ಒಂದೊಂದು ತೆರನಾಡಿದರು. ಸಿದ್ದಪ್ಪ ತುಟಿ ಎರಡು ಮಾಡಲಿಲ್ಲ. ಮೊಮ್ಮಗನನ್ನು ನೋಡಿದಾಗ, ಅವನ ಮುಖ ಅರಳುವ ಬದಲು ಬಾಡಿ ಹೋಯಿತು. ಎಲ್ಲರೂ ತನಗೇ ಚುಚ್ಚಿ ಚುಚ್ಚಿ ಮಾತಾಡಿದಂತೆ ಭಾಸವಾಯಿತವನಿಗೆ. ಮುಖ ಕೆಳಗೆ ಹಾಕಿದ

೬

ಅಂದಿನ ಇರುಳು. ಅಮಾವಾಸ್ಯೆಯ ಕಗ್ಗತ್ತಲು ಊರನ್ನೆಲ್ಲ ಮುತ್ತಿದೆ. ನಾವು ಓಣಿ-ಓಣಿಗಳಲ್ಲೆಲ್ಲ ಸುತ್ತಿ, ಒಳ್ಳೇ ಎಚ್ಚರದಿಂದ ಊರನ್ನು ಕಾಯುತ್ತಿದ್ದೇವೆ. ನನ್ನ ಮುಂದೆ ಮುಂದೆ ಯಾರೋ ಇಬ್ಬರು ಮಾತಾಡುತ್ತ ನಡೆದಂತೆ ತೋರಿತು. ಸ್ವಲ್ಪ ಅವಸರದಿಂದ ಸಾಗಿ ಅವರ ಬೆನ್ನು ಹತ್ತಿದೆ. ಅವರಲ್ಲಿ ನಡೆದ ಮಾತುಗಳು ಹೀಗಿದ್ದುವು:

" ಹುಡುಗ ಹುಟ್ಟಿದ ವೇಳೆಯೇ ಕೆಟ್ಟ! "

" ಅದೆಲ್ಲಾ ಸುಳ್ಳು; ಸಿದ್ದಪ್ಪ ಅಬರುದಾರ ಮನುಷ್ಯ. ಮಧ್ಯಾಹ್ನ ಮೊಮ್ಮಗನ ಮುಖಾ ನೋಡಿದ ಕೂಡಲೇ ಅವನಿಗೇ ಅನಿಸಿರಬೇಕು....

" ದೀಪಚಂದನೂ ಈಗ ಅಲ್ಲೇ ಇದ್ದಂತಲ್ಲ...."

" ಯಾವಾಗ ಇರೂದಿಲ್ಲ ಅಂವ ? "

" ಅದಕ್ಕs ನೋಡೋ, ಮುಂದಿಗೆ ಮುಖ ತೋರಿಸಬಾರದಂತ ಮುದುಕ ತೋಟದೊಳಗ ಹೋದವನs ಗಿಡಕ್ಕ ಉರಲು ಹಾಕಿ ಕೊಂಡಿದಾನ...."

"ಮರ್ಯಾದಿವಂತರ ಮಾತs ಹೀಂಗ ! "

"ಎಂಥಾ ಕತೆ ಆಗಿ ಹೋಯ್ತಪ್ಪಾ ಊರೊಳಗ ? "

ಇವರ ಮಾತು ಆಯ್ತು. ಅವರ ಕತೆಯಾಯಿತು. ಗ್ರಾಮ ಸಂರಕ್ಷಕ ದಳದವರಿಗೆ ಇದೂ ಗೊತ್ತಿತ್ತು ! ಮುಂದೇನು ?

ಪ್ರಶ್ನೆ ಪ್ರಶ್ನೆಯಾಗಿಯೇ ಇನ್ನೂ ನನ್ನ ತಲೆಯಲ್ಲಿ ಉಳಿದಿದೆ ! ಮುದಕ ಸತ್ತು ಹೊದರೂ ಮೊಮ್ಮಗ ಅವನ ಮೊಮ್ಮಗನಾಗಿಯೇ, ಅವನ ವಂಶವೃದ್ಧಿಗಾಗಿಯೆ ಬೆಳೆಯುತ್ತಲಿದೆ.



# ಬೀರನ ಬಾವಿ

ಬೀರ ಹಾಸಿಗೆಯಲ್ಲಿ ಹೊರಳುತ್ತಿದ್ದಾನೆ. ಕಣ್ಣಿಗೆ ನಿದ್ರೆಯಿಲ್ಲ; ಮನಸ್ಸಿಗೆ ಶಾಂತಿಯಿಲ್ಲ. ಸಾಯಂಕಾಲ ಊರಚಾವಡಿಯಲ್ಲಿ "ಹೆಚ್ಚು ಆಹಾರ ಧಾನ್ಯ ಬೆಳೆಯಿರಿ!" ಎಂಬ ವಿಷಯದ ಮೇಲೆ ಅಧಿಕಾರಿಗಳ ವ್ಯಾಖ್ಯಾನ ಕೇಳಿದ್ದನಾತ. ಆಗಿನಿಂದಲೂ ಅವನಿಗೆ ತಾನೊಂದು ಬಾವಿಯನ್ನೇಕೆ ತೋಡಬಾರದು ಎನ್ನಿಸಿತು. ಅದಕ್ಕೆ ಸರಕಾರದವರು ಧನಸಹಾಯ ಮಾಡುವರು. ಅದನ್ನು ಇಸಿದುಕೊಡಲಿಕ್ಕೆ ತಾನು ನೆರವಾಗುವೆ ಎಂದು ಮನೋಹರಪಂತರು ಹೇಳಿದಾಗಿನಿಂದಲೂ ಬೀರಪ್ಪನ ಎಣಿಕೆ ಇನ್ನಷ್ಟು ಬಲಗೊಂಡಿತು. ಅದೇ ವಿಚಾರದಲ್ಲಿ ಆ ಇರುಳೆಲ್ಲ ಅವನಿಗೆ ನಿದ್ರೆಯಿಲ್ಲ. ದಣಿದ ದೇಹ, ನೈಮರೆತ ಮನಸ್ಸುಗಳಿಂದ ನಡುವೆ ಒಮ್ಮೊಮ್ಮೆ ಕಣ್ಣು ಮುಚ್ಚಿದಾಗಲೂ ಬಾವಿಯನ್ನು ತೋಡುವ ಕನಸೇ ಕನಸು। ಹಿರಿಯ ಮಗ ಯಾತ ಹೊಡಿದ್ದಾನೆ. ಕಿರಿಯ ಹುಡುಗ ನೀರುಣಿಸುತ್ತಿದ್ದಾನೆ. ಹಸರು ಪೈರಿನಿಂದ ತೋಟ ಸುಂದರವಾಗಿ ಕಂಗೊಳಿಸುತ್ತಿದೆ. ಬೀರ ಹರ್ಷಗೊಂಡ; ಅಭಿಮಾನದಿಂದ ತೊಟದ ಮೇಲೆ ಸುತ್ತಲೂ ಕಣ್ಣಾಡಿಸಿದ. ಅಷ್ಟರಲ್ಲಿ ಅದೇನಾಯಿತೋ ಯಾತಕ್ಕೆ ಹೂಡಿದ ಎತ್ತುಗಳು ಧಡ ಧಡ ಮುಂದ ಓಡಿದವು. ಹುಡುಗ ಜಾರು ನೆಲಕ್ಕುರುಳಿದ. ಮರುಕ್ಷಣದಲ್ಲಿ "ಧಂ" ಎಂದು ಸಪ್ಪಳ ಮಾಡಿ ಯಾತ ನೀರಿನಲ್ಲಿ ಬಿದ್ದಿತು. ಎದ್ದು ಮುಂದ ಧಾವಿಸಿದ ಬೀರ. ಗಾಬರಿಯಾಗಿ ಕಣ್ದೆರೆದ. ಇನ್ನೂ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾನೆ! ದೂರದಲ್ಲಿ ಕೊರವರ ಕೇರಿಯಲ್ಲಿ ನಾಯಿಗಳು ಬೊಗಳುತ್ತಿವೆ. ಕತ್ತೆಯೊಂದು ಅಸಯ್ಯ ದನಿದೆಗೆದು ಒದರುತ್ತಿದೆ. ಕಣ್ಣು ಒರಸಿಕೊಂಡು ಇನ್ನೊಂದು ಮಗ್ಗುಲಿಗೆ ಹೊರಳಿದ ಬೀರ.

"ಇಂದು ನಿದ್ದೀನೆನು ಮಾಡುವಂತೆ ಕಾಣುದಿಲ್ಲ", ಬೀರನ ಹೆಂಡತಿ ಚಿನ್ನವ್ವ ಕೇಳಿದಳು. ಧ್ವನಿಯು ಜಡವಾಗಿತ್ತು.

"ಯಾವದಾದರೊಂದ ಲೆಕ್ಕದಲ್ಲಿ ಇರುವಾಗ ಕಣ್ಣಿಗೆ ನಿದ್ದೆ ಹ್ಯಾಗ ಬರಬೇಕು?" ಸ್ವಲ್ಪ ತಡೆದು ಬೀರ ಕೇಳಿದ.

"ಲೆಕ್ಕದೊಳಗs ಹೋಯಿತು ಪ್ರಪಂಚ ನಿಮ್ಮದು".

"ಲೆಕ್ಕಾ ಹಾಕಿ ಮಾಡಿದಾಗs ಕೂಲೀ ಮಾಡುವ ನಾವು ಹತ್ತ ಎಕರೆ ಹೊಲಾ ಗಳಿಸಿದೆವು; ಹೊಸಮನೆ ಕಟ್ಟಿಸಿದೆವು..."

ಚಿನ್ನವ್ವ ನಡುವೆಯೇ ಬಾಯಿ ಹಾಕಿ ಮುಂದೆ ಅಂದಳು: "ಇನ್ನು ಮಕ್ಕಳ ಮದುವೆಯೊಮ್ಮೆ ಮಾಡೋಣಂದರಾಯಿತು, ನಮ್ಮ ಕಣ್ಣು ಮುಂದೆ"

"ಮದುವೆ ಮೊದಲ ಮಾಡಬೇಕೋ ಬಾವಿ ಮೊದಲ ತೆಗೆಯಬೇಕೋ ಅನ್ನೋದನ್ನs ವಿಚಾರ ಮಾಡತಾ ಇದ್ದೇನೆ..."

"ಎಲ್ಲೀ ಬಾವೀ ಗೀವಿ, ಇದ್ದಷ್ಟು ಮಾಡಿ ತಿನ್ನೋಣ. ಇನ್ನು ಹೆಚ್ಚಿನ ಹಂಬಲ ಬೇಡ. ಇಲ್ಲದ್ದೊಂದು ಮಾಡಲಿಕ್ಕೆ ಹೋಗಿ, ಕಲ್ಲಿಗೆ ಹತ್ತಿ ಬೆಲ್ಲೂ ಹೋಯಿತಂತ". ಸ್ವಲ್ಪ ತಡೆದು "ಬಾವಿ ತೋಡುವಂಥ ಹೊಲ ಎಲ್ಲಿ ಅದ ನಮ್ಮದು? ಒಂದು ಮೊರಡಿ, ಇನ್ನೊಂದು ಹೊಳೆಯ ನೀರು ಬರುವಂತಹದು..."

"ಅದಕ್ಕs ಇಷ್ಟು ವಿಚಾರ ಮಾಡಬೇಕಾಗೇದ."

"ವಿಚಾರ ಮಾಡಿ ಏನಾಗೋದದ? ಹಾಲಿಲ್ಲ, ಬಟ್ಟಲಿಲ್ಲ, ಗುಟುಕು ಅಂದ ಹಾಗೇನs ಅಲ್ಲ."

"ಅಷ್ಟು ಲೆಕ್ಕ ಇಲ್ಲದ ಇಲ್ಲ ನಾ."

"ಇನ್ನೇನ ಲೆಕ್ಕ ನಿಮ್ಮದು."

ತುಸು ಕುತೂಹಲದಿಂದ ಚಿನ್ನವ್ವ ಗಂಡನ ಮುಂದಿನ ಮಾತನ್ನು ಕೇಳಲಿಕ್ಕೆ ಸಿದ್ಧವಾಗಿದ್ದಳು. ಬೀರ ಹೇಳತೊಡಗಿದ.—

"ಸಂಜೆ ದಾವಲ ಭೆಟ್ಟಿಯಾಗಿದ್ದ. ಅವನ ಹೊಲ ಐದು ಎಕರೆ ಇದೆ. ತರೀ ಅಡವಿ. ಅದರಲ್ಲಿ ಬಾವಿ ಹೊರಡುವಂತೆಯೂ ಇದೆ. ಆದರೆ ಅವನ ಮನೆಯಲ್ಲಿ ಮಾಡುವವರಿಲ್ಲ. ಅವನೇ ಮನೋಹರಪಂತರ ಮನೆಯಲ್ಲಿ ಕೆಲಸಕ್ಕೆ ಇದ್ದಾನೆ. ಅಂದಮೇಲೆ ಬಾವೀ ತೋಡಿ, ತೋಟ ಮಾಡುವ ಮಾತು ಎಲ್ಲಿ? ಆ ಹೊಲ ಒಂದು ವರ್ಷ ಮಳೆ ಆದರ ಬೆಳೀತದ. ಇನ್ನೊಂದು ವರ್ಷ ಮಳೆ ಹೋದರ ತರೀದ ಬೀಳತದ. ಅದಕ್ಕೆ ಅದನ್ನ ಕೊಟ್ಟು ನಮ್ಮ ಹೊಳೆ ಮುಳುಗುವ ಮೂರ ಎಕರೆ ಹೊಲ ತಗೋಲಿಕ್ಕೆ

ಒಪ್ಪಿದಾನ ಆತ. ಅದನ್ನೂ ಮಾಡಿಸಿಕೊಡತೇನಂತ ಪಂತರು ಹೇಳಿದಾರ. ಅವನಿಗೂ ಚಿಂತೆಯಿಲ್ಲದೆ ಬೆಳೆ ಬರುವ ಹೊಲ ಆಯ್ತು. ನಮಗೂ ತೋಟ ಆಯ್ತು, ಎರಡು ಎಕರೆ ಹೊಲ ವೊಂದ ಹೆಚ್ಚಿಗೆ ಬಂತು."

"ಬಂಗಾರ ತುಂಡಿನಂಥ ನಮ್ಮ ಡೋಣಿ ಹೊಲ ಹೋಗತದಲ್ಲ!"

"ಮೂರು ಎಕರೆ ಕೊಟ್ಟರೂ ಮತ್ತ ಮೂರು ಎಕರೆ ಅಲ್ಲಿ ಉಳಿತದಲ್ಲ. ಸಾಕು."

"ಏನ ಮಾಡತೀರಿ ನೋಡಿ! ಇಷ್ಟೆಲ್ಲ ಆಗಿ, ನಾವು ತೋಟದ ಸುಖ ಉಣ್ಣೋದ ಬಹಳ ದೂರ ಅದ. ಮದುವೆಗೆ ಬಂದ ಮಕ್ಕಳೂ ಮನೆಯೊಳಗ ಇದ್ದಾರ," ಎಂದು ಅನುಮಾನದ ಸ್ವರದಲ್ಲಿ ಚಿನ್ನವ್ವ ನುಡಿದು ಸುಮ್ಮನಾದಳು.

"ಮದುವೀನೂ ಮಾಡತೀನಿ, ಬಾವೀನೂ ತೆಗೆಯಿಸತೇನಿ. ನೋಡಂತ," ಸ್ವಲ್ಪ ಆಧ್ಯತೆಯಿಂದಲೇ ಬೀರ ನುಡಿದ.

ಹಾಗೆ ನುಡಿಯುವಂತೆ ಬೀರ ಮನದಲ್ಲಿ ಮುಂಡಿಗೆಯನ್ನೂ ಮಾಡಿಯೇ ಇದ್ದ. ಪಂತರು ಹೊಲವನ್ನು ಅದಲು-ಬದಲು ಮಾಡಿಸಿ ಕೊಡುವರು; ಸರಕಾರದಿಂದ ಸಹಾಯಧನವನ್ನು ಮಾಮಲೇದಾರರಿಗೆ ಹೇಳಿಸಿ ಕೊಡಿಸುವರು. ಏನಿಲ್ಲೆಂದರೂ ಮೂರು ಸಾವಿರ ರೂಪಾಯಿ ಸಾಲ ಸರಕಾರದಿಂದ ಸಿಕ್ಕುವುದು. ಮಕ್ಕಳೂ ನಾನೂ ಕೂಡಿ ಚನ್ನಾಗಿ ದುಡಿದರ ಎರಡೇ ಸಾವಿರದಲ್ಲಿ ಬಾವಿ ಸಿದ್ಧವಾಗಿಬಿಡುವುದು. ಉಳಿದ ಸಾವಿರವಲ್ಲಿ ಮಕ್ಕಳ ಮದುವೆ. ಹೊಲದಲ್ಲಿ ಹೇಗೂ ಕಡಲೆ-ಗೋದಿಗಳನ್ನು ಬಿತ್ತಿರುವೆ. ಇನ್ನೇನು ಮದುವೆಗಷ್ಟು ಅರಿವೆ ಅಂಚಡಿಗಳನ್ನು ಕೊಂಡರಾಯಿತು. ಹೀಗೇನೇನೊ ವಿಚಾರಿಸುತ್ತ ಬೆಳಗಿನ ಜಾವದಲ್ಲಿ ಬೀರ ನಿದ್ದೆ ಹೋದ.

ಮನೋಹರಪಂತರೆಂದರೆ ಆ ಊರಿಗೊಂದು ಕಣ್ಣಿದ್ದಂತೆ. ಊರ ಜನರ ಹಿತಾಹಿತಗಳೆಲ್ಲ ಅವರನ್ನೇ ಕೂಡಿವೆ. ಅಜ್ಞ ಜನರಿಗೆ ಮಾರ್ಗದರ್ಶನ ಮಾಡುವುದು, ಸರಕಾರದ ಚಟುವಟಿಕೆಗಳಿಗೆಲ್ಲ ತನ್ನ ಊರಲ್ಲಿ ಮೂರ್ತ ಸ್ವರೂಪ ಕೊಡುವುದೂ ಮೊದಲಾದ ಕಲಸಗಳೆಲ್ಲ ಪಂತರನ್ನೇ ಸೇರಿವೆ. ಸರಕಾರಕ್ಕೂ ಜನತೆಗೂ ಒಂದು ಸೇತುವೆಯಂತೆ ಮನೋಹರ

ಪಂತರಿದ್ದಾರೆ. ಅವರ ಅಂಗವಿಲ್ಲದೆ ಆ ಊರಲ್ಲಿ ಯಾವ ಕಾರ್ಯಗಳೂ ಆಗವು. ಆದರಲ್ಲಿ ಪಂತರು ಈಗೀಗ ದೇಶಭಕ್ತ ಬೇರೆ ಆಗಿದ್ದಾರೆ. ಬ್ರಿಟಿಶರು ಭಾರತವನ್ನು ಆಳುವ ಕಾಲಕ್ಕೇನೋ ತನ್ನ ಮಾನವನ್ನು ಕಾಯ್ದು ಕೊಳ್ಳಲಿಕ್ಕೆಂದು ಅವರ ಹಸ್ತಕನಾಗಿ ಕೆಲಸ ಮಾಡಿದ್ದರು. ಬಿರುದು ಬಾವುಲಿಗಳನ್ನು ಪಡೆದಿದ್ದರು. ಈಗ ಭಾರತ ಸ್ವತಂತ್ರವಾಯಿತು. ಕಾಂಗ್ರೆಸ ಸರಕಾರ ಅಧಿಕಾರ ಸ್ವೀಕರಿಸಿತು. ಕೂಡಲೇ ಪಂತರು ಖಾದ್ದರ ಧರಿಸಿದರು, ದೇಶಭಕ್ತರಾದರು. ರಾಷ್ಟ್ರೋದ್ಧಾರದ ರಥವನ್ನು ನಡೆಯಿಸುವ ಸಾರಥಿಗಳಾದರು.

ಪಂತರಿಗೆ ಬಹಳ ದಿನಗಳಿಂದ ತನ್ನ ದನಗಳಿಗೊಂದು ಕೊಟ್ಟಿಗೆಯನ್ನು ಕಟ್ಟಿಸುವ ಯೋಚನೆಯಿದ್ದಿತು. ಆದರೆ ಅದು ಅವರ ದುಡ್ಡು ವೆಚ್ಚವಾಗದೆ ಆಗಬೇಕು. ಊರೊಳಗಿನ ಒಕ್ಕಲಿಗರು ಕಲ್ಲು ಮಣ್ಣುಗಳನ್ನು ತಂದು ಹಾಕಬೇಕು. ಊರ ಉಪ್ಪಾರರು ಕೂಲಿ ತಕ್ಕೊಳ್ಳದೆ ಕಟ್ಟಿಕೊಟ್ಟಿರಬೇಕು. ಕೆಲವರು ತಮ್ಮ ತೋಟ ಪಟ್ಟಿಗಳೊಳಗಿನ ಗಿಡ-ಕಟ್ಟಿಗೆಗಳನ್ನು ಕೊಟ್ಟು ಸಹಕರಿಸಬೇಕು. ಎಂದರೆ ಪಂತರ ಭವ್ಯ ಕೊಟ್ಟಿಗೆ ಸಿದ್ಧವಾಗುವುದು. ಪಂತ ದೇಶಭಕ್ತನಲ್ಲವೇ ? ದೇಶಕ್ಕಾಗಿ ತನ್ನ ದೇಹವನ್ನು ತೆಯ್ದು ಸಣ್ಣಾಗ ಮುಖಂಡನಾದ. ಖಾದಿಯನ್ನು ಧರಿಸಿ, ದೇಶಭಕ್ತನೆಂಬ ಪ್ರಮಾಣಪತ್ರವನ್ನು ಈಗಾಗಲೇ ಜನತೆಯಿಂದ ಪಡೆದುಕೊಂಡಿದ್ದ. ಅಂದಮೇಲೆ ಇದೆಲ್ಲ ಆಗಬೇಕು.

ಮೊನ್ನೆ ಪಂತರು ತನ್ನ ಹೊಲದ ಬೆಳೆಯನ್ನು ನೋಡಲಿಕ್ಕೆ ಹೋದಾಗ ದಾರಿಯಲ್ಲಿ ಬೀರನ ಡೋಣೀ ಹೊಲದಲ್ಲಿ ನಾಲ್ಕು ಸುಂದರ ಗಿಡಗಳನ್ನು ಕಂಡರು. ಆಗಲೇ ಅವರಿಗೆ ತನ್ನ ಕೊಟ್ಟಿಗೆಗೆ ಈ ಗಿಡಗಳು ಅವಶ್ಯವಾಗಿ ಬೇಕೆಂಬ ವಿಚಾರ ಬಂದು ಬಿಟ್ಟಿತು. ಒಂದೊಂದು ಗಿಡದಲ್ಲಿಯೂ ನಾಲ್ಕಾರು ತೊಲೆಗಳೂ, ಕಂಬಗಳೂ ಹೊರಡುವಂತಿವೆ. ಈಗಲೇ ಗಿಡಗಳನ್ನು ಕಡಿಸಿ ಒಗೆದರೆ ಬೇಸಿಗೆಗೆ ಮನೆ ಹಾಕಲಿಕ್ಕೆ ತಕ್ಕವಾಗುವವು ಎಂದು ಲೆಕ್ಕವನ್ನೂ ಹಾಕಿದರು. ಅಂದಿನಿಂದ ಆ ಗಣಿತವನ್ನು ಬಿಡಿಸುವುದರಲ್ಲಿಯೇ ಅವರ ಮನಸ್ಸು ತೊಡಗಿತು.

ಇಂಥ ಸಂದರ್ಭದಲ್ಲಿ ಬೀರ—ದಾವಲರಲ್ಲಿ ಹೊಲಗಳ ಅದಲು—ಬದಲುಗಳ ಪ್ರಶ್ನೆಯೆದ್ದಿತು. ಅದನ್ನು ಯಶಸ್ವಿಯಾಗಿ ಮಾಡುವುದು ಮನೋಹರಪಂತರನ್ನೇ ಕೂಡಿದ್ದಿತು. ಅದಕ್ಕಾಗಿ ಇಬ್ಬರೂ ಅವರ ಮನೆಗೆ ಎಡತಾಗಹತ್ತಿದರು. ದಾವಲನಂತೂ ಅವರ ಮನೆಯ ಆಳು ಮನುಷ್ಯ. ಅವನ ಹಿತ ಮಾಡುವುದು ಪಂತರ ಕರ್ತವ್ಯವಾಗಿದ್ದಿತು. ಅದರಂತೆ ದಾವಲನ ಮುಂದೆ ಆಡಿಯೂ ತೋರಿಸಿದ್ದರು. ಬೀರನ ಡೋಣಿಯ ಹೊಲದಲ್ಲಿ ಯಾವ ಭಾಗವು ನದಿಯ ನೀರಿನಿಂದ ಬೇಗ ತೊಯ್ಯುವದೋ ಅದೇ ಭಾಗವನ್ನು ಇಸಿದುಕೊಡುವುದಾಗಿ ಪಂತರು ದಾವಲನಿಗೆ ಆಶ್ವಾಸನವಿತ್ತಿದ್ದರು. ಹಾಗೆ ಮಾಡಿದಲ್ಲಿ ದಾವಲ ಇನ್ನೊಂದು ವರ್ಷ ಪಂತರ ಮನೆಯಲ್ಲಿ ಪುಕ್ಕಟೆ ದುಡಿಯಲು ಸಿದ್ಧವಾಗಿದ್ದ. ನಗಿಯ ನೀರು ಸ್ವಲ್ಪ ಏರಿದ ಕೂಡಲೇ ನೀರುಣ್ಣುವಂತಹ ಹೊಲವನ್ನು ತನಗೆ ಸಿಗುವಂತೆ ಮಾಡುವನೆಂದ ಮೇಲೆ ಯಾವ ಆಳು ಒಂದು ವರ್ಷ ದುಡಿಯಲಿಕ್ಕೆ ಸಿದ್ಧವಾಗಲಿಕ್ಕಿಲ್ಲ !

ಇತ್ತ ಬೀರನನ್ನು ಕರೆದು, ಮನೋಹರಪಂತರು ತನ್ನ ಕೊಟ್ಟಿಗೆಗಾಗಿ ಅವನ ಡೋಣಿಯ ಹೊಲದೊಳಗಿನ ನಾಲ್ಕು ಗಿಡಗಳನ್ನು ಕೇಳಿದರು. ಅವನಿಗೆ ತಾನು ಹೊಲದ ಕೆಲಸ ಮಾಡಿ ಕೊಡುವವನಿರುವದರಿಂದ ತನ್ನ ಮಾತಿಗೆ ಯಶ ಸಿಕ್ಕೇ ಸಿಗುವುದೆಂದು ಪಂತರು ನಂಬಿದ್ದರು. ಆದರೆ ಬೀರನೂ ಆ ಗಿಡಗಳನ್ನು ನೋಡಿ, ತನ್ನ ಮುಂದಿನ ಯೋಜನೆಗಳನ್ನು ಹಾಕಿಟ್ಟಿದ್ದನು. ತೋಟದಲ್ಲಿ ಬಾವಿಯಮೇಲೆ ಚಿಕ್ಕ ಮನೆ ಕಟ್ಟಿಸಬೇಕು ಯಾತದ ವ್ಯವಸ್ಥೆಗಾಗಿ ಕಟ್ಟಿಗೆಗಳು ಬೇಕು. ಇವೆಲ್ಲ ಆ ಗಿಡಗಳಲ್ಲಿ ಹೊರಡುವವು. ಇನ್ನು ಮೇಲಿನ ಬರಲುಗಳು ಮಕ್ಕಳ ಮದುವೆಯಲ್ಲಿ ಉರುವಲ ಆಗುವವು. ಹೀಗೆ ಅವನ ಪ್ರಪಂಚದ ಲೆಕ್ಕವಿದ್ದಿತು. ಆದ್ದರಿಂದ ಪಂತರ ಮಾತಿಗೆ ಅವನು ಒಪ್ಪುವಂತಿರಲಿಲ್ಲ. ಅವರು ಕೆಲಸ ಮಾಡಿಕೊಟ್ಟಮೇಲೆ ಏನಾದರೂ ಕಾಣಿಕೆ ಕೊಟ್ಟರಾಯಿತೆಂದು ಮಾತ್ರ ಯೋಚಿಸಿದ್ದನು. ಅದರಂತೆ ಪಂತರ ಮುಂದೆ ಆಡಿಯೂ ಬಿಟ್ಟನು.

ಇದು ಪಂತರಿಗೆ ಸರಿಬೀಳಲಿಲ್ಲ. ಬೀರ ಕೊಡುವ ಕಾಣಿಕೆಯ ದ್ರವ್ಯಕ್ಕಿಂತ ಆ ಗಿಡಗಳ ಬೆಲೆ ಎಷ್ಟೋ ಹೆಚ್ಚಾಗುತ್ತಿದ್ದಿತು. ಒಕ್ಕಲಿಗ ಲೆಕ್ಕ

ವಿಲ್ಲದೆ ಕೊಟ್ಟದ್ದೇ ಚೆನ್ನು. ಅಳತೆಯು ಪ್ರವ್ಯ ಪಾಪ? ಅವನೆಷ್ಟು ಕೊಟ್ಟಾನು ಆ ಆಯುವ ಲೆಕ್ಕ ಏನಿದ್ದರೂ ಬೀರ ತನ್ನ ಮಾತಿಗೆ ಇಲ್ಲವೆಂದನಲ್ಲಾ, ಎಂಬ ಸಂಗತಿಯೇ ಪಂತರ ಮನಸ್ಸನ್ನು ಬಹಳ ಕೆರಳಿಸಿತು ಅದರಿಂದ ಅವರೂ ಯೊಚನೆಯಲ್ಲಿ ಬಿದ್ದರು. ಇನ್ನು ಹೊಲಗಳ ವ್ಯವಹಾರವನ್ನು ಮುರಿಯುವಂತಿರಲಿಲ್ಲ. ತನ್ನ ಆಳು ದಾವಲನಿಗೆ ಹೇಳಿ ಇಡಲಾಗಿದ್ದಿತು. ಅಲ್ಲದೆ ತಾನು ನೆರವಾಗದಿದ್ದರೂ ಇನ್ನುಮೇಲೆ ಆ ಕೆಲಸ ಆಗಿಯೇ ತೀರುವುದು. ಅಂದಮೇಲೆ ಮಾಡುವುದೇನು ? ಪಂತರು ಬಹಳ ವಿಚಾರಿಸಿದರು. ವಿಚಾರಿಸಿ, ವಿಚಾರಿಸಿ ಒಂದು ನೆಲೆಗೆ ಬಂದು ಬಿಟ್ಟರು. ಆ ಗಿಡಗಳನ್ನಂತೂ ಬಿಡತಕ್ಕದ್ದಲ್ಲ. ಬಡ ಬುದ್ಧಿಯ ಬೀರನ ಮುಂದೆ ಬಿದ್ದು ಹೊದರೆ ಇಷ್ಟು ದಿನ ಊರನ್ನಾಳಿ ಬಂದ ಭಾಗ್ಯವೇನು ? ಎಂದು ತನ್ನನ್ನೇ ತಾನು ಕೇಳಿಕೊಂಡ. ಹೆಮ್ಮೆಯ ನಗೆಯೊಂದನ್ನು ಬೀರಿ ದಾವಲನನ್ನು ಕರೆದು ಹೇಳಿದ:—

ನಾಳೆ ಬೀರನ ಡೋಣಿ ಹೊಲ ಹೋಗಿ ನೋಡಿ ಬರಬೇಕು. ಹೇಗೆ ಹಂಚಿ ತಕ್ಕೊಂಡರೆ ನಮಗೆ ಒಳ್ಳೆಯ ನೆಲ ಬರುವುದು ನೊಡಬೇಕು.."

ದಾವಲ ತನ್ನೊಡೆಯನು ಹೇಳಿದ ತನ್ನ ಹಿತದ ಮಾತನ್ನು ಕೇಳಿ ಹಿರಿ ಹಿರಿ ಹಿಗ್ಗಿದ. ಮನದಲ್ಲಿಯೇ ಕೃತಜ್ಞತೆಯನ್ನು ಸಲ್ಲಿಸಿದ.

ಪಂತರ ಮಾತಿನಂತೆ ಮರುದಿನ ಇಬ್ಬರೂ ಹೋಗಿ ಹೊಲವನ್ನು ನೋಡಿಬಂದರು. ಪಂತ ಮನದಲ್ಲಿಯೇ ಲೆಕ್ಕ ಹಾಕಿ ನೋಡಿದ. ಹೊಲವನ್ನು ಹೇಗೆ ತುಂಡುಗಡಿದರೆ ಆ ಗಿಡಗಳು ದಾವಲನ ಪಾಲಿಗೆ ಬರುವುವು, ಎಂಬುದೇ ಅವನ ಗಣಿತವಾಗಿದ್ದಿತು. ಅದರಲ್ಲೂ ಹೊಳೆಯಿಂದ ಬೇಗ ಮುಳುಗುವ ಭೂಮಿಯೂ ದಾವಲನ ಪಾಲಿಗೆ ಬರಬೇಕು. ಈ ಎರಡೂ ಯೋಜನೆಗಳು ಸಾಧಿಸುವಂತಿರಲಿಲ್ಲ. ಒಳ್ಳೆಯ ಜಮೀನು ಬಂದರೆ ಗಿಡಗಳಿಲ್ಲ; ಗಿಡಗಳು ಬಂದರೆ ಒಳ್ಳೆಯ ನೆಲವಿಲ್ಲ. ಹೀಗೆ ವ್ಯಸ್ತ ತ್ರೈರಾಶಿಕವಾಗುತ್ತಿದ್ದಿತು. ಅದರಿಂದ ಪಂತ ಚಿಂತೆಯಲ್ಲಿ ಬಿದ್ದ. ತನ್ನ ಮರಗಳ ಸಂಪಾದನೆಗಾಗಿ ಕೆಟ್ಟ ಅಡವಿಯನ್ನು ದಾವಲನ ಪಾಲಿಗೆ ಹಾಕಲಿಕ್ಕೆ ಒಂದು ಕ್ಷಣ ಅವನ ಮನಸ್ಸು ಒಪ್ಪದು. ಒಪ್ಪಿದರೂ ಈಗ ದಾವಲನಿಗೆ

ಹೇಳಿದರೆ ಅಂಥ ಹೊಲವನ್ನು ತಕ್ಕೊಳ್ಳುವಷ್ಟು ಅವನೂ ಹುಚ್ಚನಾಗೀರಲಿಲ್ಲ. ಆ ಒಳ್ಳೆಯ ಅಡವಿ ತನಗೆ ಪಂತನ ಪ್ರಯತ್ನದಿಂದಲೇ ಸಿಗತಕ್ಕದೆಂದು ಅವನು ಒಂದು ವರ್ಷ ಅವನ ಮನೆಯಲ್ಲಿ ಸಂಬಳವಿಲ್ಲದೆ ದುಡಿಯಲಿಕ್ಕೂ ಸಿದ್ಧನಾಗಿದ್ದ.

ಅದರಿಂದ ದಾವಲನ ವಿಚಾರವನ್ನು ತಿರಿಗಿಸುವಂತಿರಲಿಲ್ಲ.

ಪಂತನಿಗೆ ಇದು ಒಳ್ಳೇ ಸಮಸ್ಯೆಯಾಗಿಬಿಟ್ಟಿತು. ಬೀರ-ದಾವಲರಿಬ್ಬರೂ ಬೇಗನೆ ಸಬ್-ರಜಿಸ್ಟ್ರಾರರ ಕಚೇರಿಗೆ ಹೋಗಿ, ಹೊಲಗಳ ಬದಲಾವಣೆಯ ಕಾಗದವನ್ನು ರಜಿಸ್ಟರ ಮಾಡಿಸಿಕೊಂಡು ಬರಲಿಕ್ಕೆ ಆತುರ ತೋರಿಸ ಹತ್ತಿದರು. ಬೀರನಿಗೆ ಬಾವಿ ತೆಗೆಯಿಸುವ ಆತುರ. ದಾವಲನಿಗೆ ಒಳ್ಳೆಯ ಹೊಲವು ಸಿಗುವ ಸಂಧಿ ಹೋದೀತಲ್ಲ ಎಂಬ ಹೆದರಿಕೆ. ಬೀರನ ಡೋಣೀ ಹೊಲಕ್ಕೆ ಊರಲ್ಲಿ ಮತ್ತೂ ಕೆಲವರು ತಮ್ಮ ಹೊಲಗಳನ್ನು ವಿನಿಮಯ ಮಾಡಿಕೊಳ್ಳಲಿಕ್ಕೂ ಸಿದ್ಧರಿದ್ದರು. ಅವೂ ಬಾವಿ ಹೊರಡುವಂಥ ಹೊಲಗಳು. ಅದರಿಂದಲೇ ಬೀರ ಪಂತನಿಗೆ ಗಿಡಗಳನ್ನು ಕೊಟ್ಟೂ ತನ್ನ ಹೊಲದ ವಿನಿಮಯ ಮಾಡಿಕೊಳ್ಳಲಿಕ್ಕೆ ಸಿದ್ಧನಿರಲಿಲ್ಲ. ಆದರೂ ಯಾವುದಾದರೊಂದು ಹೊಲವನ್ನು ಮಾತ್ರ ಅವನಿಗೆ ಕೂಡಲೇ ದೊರಕಿಸಬೇಕಾಗಿದ್ದಿತು. ಬೇಗನೆ ಬಾವಿಯನ್ನು ತೋಡಿ, ಹೆಚ್ಚಿಗೆ ಆಹಾರ ಧಾನ್ಯವನ್ನು ಬೆಳೆಯಿಸಿ, ಸ್ವತಂತ್ರ ಭಾರತದ ಆಹಾರ ಸ್ವಾವಲಂಬನಕ್ಕೆ ತನ್ನ ಕೈಯಿಂದಾದಷ್ಟು ನೆರವಾಗಬೇಕೆಂದು ಅವನ ಹಂಬಲವಿದ್ದಿತು: ಈ ಹಂಬಲವು ಬಲಗೊಳ್ಳಲಿಕ್ಕೆ ಅವನ ಮನೆತನದ ಸ್ವಾರ್ಥವೂ ಸ್ವಲ್ಪ ಕಾರಣವಾಗಿತ್ತು. ಅದೂಸಹಜವಾದುದೇ. ದೇಶಕ್ಕಾಗಿ ತನ್ನ ಮನೆತನವನ್ನೇ ಪೂರ್ಣ ನೋಡದೆ ಇರುವಂಥ ಚೇತನ ಎಷ್ಟು ಜನರಿಗಿರುವುದು? ತನ್ನ ಕೌಟುಂಬಿಕ ಜೀವನದಲ್ಲಿ ರಾಷ್ಟ್ರೀಯ ದೃಷ್ಟಿಯಿದ್ದರಾಯಿತು ಎನ್ನುವ ಸಂಸ್ಕೃತಿ ಬೀರನದು. ಅದು ಯಾರ ವ್ಯಾಖ್ಯಾನವನ್ನೂ ಕೇಳಿ ಬಂದ ಸಂಸ್ಕೃತಿಯಲ್ಲ. ಹುಟ್ಟನಿಂದಲೇ ಭಾರತೀಯ ಬೇಸಾಯಗಾರನು ಪಡೆದುಬಂದ ಭಾಗ್ಯವದು ! ದುಡಿದುಣ್ಣುವರ ಧೀರ ದಾರಿಯದು !

ಪಂತನ ತಂತ್ರ ಪಾಶ್ಚಾತ್ಯ ಸಂಸ್ಕೃತಿಯ ಪರಿಣಾಮವು. ಅವನು ಒಕ್ಕಲಿಗರಿಬ್ಬರನ್ನೂ ಕರೆಯಿಸಿ ಹೇಳಿದ—''ಹೀಗೆ ಅವಸರ ಮಾಡಿದರೆ

ಕೆಲಸ ಆಗದು. ಅದು ಸರಕಾರೀ ಕೆಲಸ. ಒಮ್ಮೆ ಆದಮೇಲೆ ಮುಂದೆ ಯಾವ ತರದ ತೊಂದರೆಯೂ ಉಂಟಾಗಬಾರದು. ಹಾಗೆ ಮಾಡಿಸಿಕೊಡಬೇಕಾಗುತ್ತದೆ. ದಾವಲ ನನ್ನ ಮನೆಯ ಆಳಿದ್ದರೇನಾಯಿತು. ಬೀರ ನನ್ನ ಹೊರಕ್ಕೈಯಿಂದ ಹೊಡೆಯುವಂತಿಲ್ಲ. ಇಬ್ಬರೂ ನನಗೆ ಸಮಾನರು, ಬೇಕಾದವರು ಅದಕ್ಕೆ ಊರೊಳಗಿನ ಪಂಚರ ಸಮಕ್ಷಮವೂ ಮಾತು-ಕತೆಗಳಾಗಲಿ!"

ನೀವಿದ್ದೀರಿ ಆಯಿತಲ್ಲ! ನಮ್ಮಿಬ್ಬರಿಗೂ ಒಪ್ಪಿಗೆಯಿದ್ದಮೇಲೆ ನಡುವೆ ಇನ್ನೊಬ್ಬರ ಅವಶ್ಯಕತೆ ಏನಿದೆ? ನಿಮಗೆ ಸವಡು ನೋಡಿಕೊಂಡು, ಒಂದು ದಿನ ಕಚೇರಿಗೆ ಹೋಗಿ ಮಾಡಿಕೊಂಡು ಬಂದು ಬಿಟ್ಟರಾಯಿತು.

ದಾವಲನ ಮುಖದ ಕಡೆಗೆ ನೋಡುತ್ತ ಬೀರ ನುಡಿದ. ದಾವಲ ಸುಮ್ಮನಿದ್ದು, ಬೀರನ ಮಾತಿಗೆ ತನ್ನ ಒಪ್ಪಿಗೆಯನ್ನು ಸೂಚಿಸಿದ.

ಬೀರನ ಮಾತನ್ನು ಕೇಳಿ, ಪಂತ ಸ್ವಲ್ಪ ಕೆರಳಿ ನುಡಿದ. "ಎಷ್ಟಾದರೂ ಹುಂಬ ಒಕ್ಕಲಿಗರು ನೀವು! ಕೆಲಸದ ಖರ್ಚು ವೆಚ್ಚಗಳ ವಿಚಾರವಿಲ್ಲ. ಕಚೇರಿಯ ಕಟ್ಟೆ ಹತ್ತುವದೆಂದರೆ ಸುಮ್ಮನೆ ಆಗುವದಿಲ್ಲ. ಬಾಗಿಲದ 'ಪಟ್ಟೇವಾಲಾ' ನನ್ನು ಹಿಡಿದುಕೊಂಡು ಎಲ್ಲರ ಕೈಯನ್ನೂ ಬೆಚ್ಚಗೆ ಮಾಡಬೇಕಾಗುತ್ತದೆ. ಕಾಗದ, ರಜಿಸ್ಟರದ ಖರ್ಚು ಎಲ್ಲ ಕೂಡಿ ನೂರಾರು ರೂಪಾಯಿಗಳಾದರೂ ಬೇಡವೆ? ಇದನ್ನು ನಿಮ್ಮಿಬ್ಬರಲ್ಲಿ ಯಾರು ವಹಿಸಿಕೊಳ್ಳಬೇಕೆಂಬುದು ನಿರ್ಣಯವಾಗಬೇಡವೆ? ಇದೀಗ ಆಶ್ವಿನ ತಿಂಗಳು, ನಾಳೆಯೇ ಹೊಲಗಳನ್ನು ಅದಲು ಬದಲು ಮಾಡತಕ್ಕವರು ನೀವು, ಈ ವರ್ಷದ ಬೆಳೆಗಳನ್ನು ಯಾರು ಯಾವ ಹೊಲದಿಂದ ತಕ್ಕೊಳ್ಳಬೇಕು, ಡೋಣೀ ಹೊಲದ ಯಾವ ಭಾಗ ದಾವಲನಿಗೆ ಕೊಡಬೇಕು, ಇವೆಲ್ಲ ವಿಚಾರ ನಾಲ್ಕು ಜನರ ಎದುರಿಗೆ ಆಗಲಿಕ್ಕೆ ಬೇಡವೆ? ನಾನೊಬ್ಬನೇ ನಿಮ್ಮಂಥ ಹುಂಬರ ನಡುವೆ ಸಿಕ್ಕಿ ಎಲ್ಲಿ ಒದ್ದಾಡಲಿ? ಈ ಮಾತುಗಳೆಲ್ಲ ಕಚೇರಿಯಲ್ಲಿ ಆಗತಕ್ಕವೆ? ಅದಕ್ಕ ನಾಲ್ಕು ದಿನ ಹೋಗಲಿ, ಒಂದು ದಿನ ಸವಡು ಮಾಡಿಕೊಂಡು, ಒಂದಿಬ್ಬರನ್ನು ಕರೆದು ಮಾತಾಡಿ ಮುಗಿಸೋಣ. ಆಮೇಲೆ ನಿಮ್ಮ ನಿಮ್ಮ ಹೊಸ ಹೊಲಗಳಲ್ಲಿ

ಹೋಗಿ ಕೆಲಸಕ್ಕೆ ಆರಂಭಿಸಬಹುದು. ರಜಿಸ್ಟರ ಮಾಡುವುದೇನು ಮಹಾ ಕೆಲಸ ! ಮುಂದೆ ಬೇಕಾದಾಗ ಒಂದು ದಿನ ಹೋಗಿ ಮಾಡಿ ಕೊಂಡು ಬಂದು ಬಿಟ್ಟರಾಯಿತು ''

ಸಂತರ ಈ ಉದ್ದ ಉಪನ್ಯಾಸದ ವಿಷಯವು ಶ್ರೋತೃಗಳಿಬ್ಬರಿಗೂ ವಿಚಾರಣೀಯವೆನಿಸಿತು. ಆದರೆ ಹೊಸದೆನಿಸಲಿಲ್ಲ. ಈ ಎಲ್ಲ ಮಾತುಗಳ ಬಗ್ಗೆ ಬೀರ ದಾವಲರಿಬ್ಬರೂ ತಮ್ಮ ತಮ್ಮಲ್ಲಿ ವಿಚಾರ ಮಾಡಿಯೂ ಇಟ್ಟು ಕೊಂಡಿದ್ದರು.

ಬೀರ ತನ್ನಲ್ಲಿಯೇ ಲೆಕ್ಕ ಹಾಕಿದ್ದ : ಹೊಲ ತಕ್ಕೊಂಡ ಮರುದಿನ ಬಾವಿಯ ಕೆಲಸ ಆರಂಭಿಸಬೇಕು. ಸರಕಾರದಿಂದ ಹಣ- ಬರುವವರೆಗೆ ಮನೆಯೊಳಗಿದ್ದ ಐದಾರು ನೂರು ರೂಪಾಯಿಗಳನ್ನು ಅದಕ್ಕೆ ವೆಚ್ಚಮಾ ಡಿದರಾಯಿತು. ಅದಕ್ಕಾಗಿ ದಾವಲನ ಹೊಲವು ಕೂಡಲೇ ತನ್ನ ವಶಕ್ಕೆ ಬರಬೇಕು. ಹಾಗಾಗಬೇಕಾದರೆ ತನ್ನ ಡೋಣೀ ಹೊಲವನ್ನು ಈಗಲೇ- ಬೆಳೆಯ ಸಹಿತ-ದಾವಲನಿಗೆ ಒಪ್ಪಿಸಬೇಕಾಗುವುದು. ಹೀಗೆ ಮಾಡುವ ದರಿಂದ ತನಗೇ ಹಾನಿ. ಡೋಣೀ ಹೊಲದಲ್ಲಿ ಬೆಳೆ ಚನ್ನಾಗಿದ್ದಿತು. ದಾವಲನ ಹೊಲದ ಬೆಳೆಗಿಂತ ಹೆಚ್ಚಾಗಿ ಬರುವಂತಿದ್ದಿತು. ಇದರಲ್ಲಿ ನೂರಾರು ರೂಪಾಯಿಗಳ ಅಂತರವಾಗುವಂತಿದ್ದಿತು. ಅದನ್ನರಿತು ದಾವಲ ಕಚೇರಿಯ ವೆಚ್ಚ ನೋಡಿಕೊಂಡುಬಿಟ್ಟರೆ ಸರಿಹೋಯಿತು.

ಈ ವಿಚಾರಸರಣಿಗೆ ದಾವಲನೂ ವಿರೋಧ ಮಾಡುವಂತಿರಲಿಲ್ಲ. ಆದರೆ ಆತ ಬಡವ, ಕಚೇರಿಯ ವೆಚ್ಚಕ್ಕೆ ರೊಕ್ಕ ಹಣವನ್ನು ಕೊಡುವ ಸ್ಥಿತಿ ಅವನದಿರಲಿಲ್ಲ. ಅದನ್ನು ಈಗ ಸಂತರೇ ಹಾಕಿ, ಮುಂದೆ ಸುಗ್ಗಿ ಯಾದಮೇಲೆ ಬಡ್ಡಿ ಸಹಿತ ತಕ್ಕೊಂಡರೂ ಅವನಿಗೆ ಒಪ್ಪಿಗೆಯಿತ್ತು. ಇದಾಗುವಂತಿರದಿದ್ದರೆ ಬೀರ ಖರ್ಚುಹಾಕಿ ಮಾಡಿಕೊಡಬೇಕು. ಆ ಹಣವನ್ನು ಕಳೆದುಕೊಳ್ಳಲಿಕ್ಕೆ ಹೆಚ್ಚಿಗೆ ಬೆಳೆದ ಡೋಣೀ ಹೊಲದ ಬೆಳೆ ಯನ್ನು ಇದೊಂದು ವರ್ಷ ಅವನೇ ತಕ್ಕೊಂಡರೂ ಅಡ್ಡಿಯಿಲ್ಲ. ಕಡಿಮೆ ಕಾಳು ಬರುವ ತನ್ನ ಹೊಲದ ಬೆಳೆ ತನಗಿದ್ದರಾಯಿತು. ಹೀಗೆ ಮಾಡಿ ದಾಗಲೂ ಬೀರ ತಾನು ತಕ್ಕೊಂಡ ಹೊಲದಲ್ಲಿ ಬಾವಿಯನ್ನು ಈಗಲೇ

ತೋಡಲು ಆರಂಭಿಸಬಹುದು. ಅದರಿಂದ ಆಗುವ ಅಲ್ಪ ಸ್ವಲ್ಪ ಬೆಳೆಯ ಹಾನಿಯನ್ನು ತಾನು ತಾಳಿಕೊಂಡರಾಯಿತು. ಇದೇ ಬೀರನು ಮಾಡುವ ವೆಚ್ಚಕ್ಕೆ ಪ್ರತಿಫಲವೆಂದು ತನ್ನಿಂದ ಸಂದಂತಾಯಿತು. ಎಂಬ ಯೋಚನೆಯು ದಾವಲನದಾಗಿದ್ದಿತು. ಇದನ್ನು ಕೇಳಿದ್ದರೆ ಬೀರನೂ ಒಪ್ಪುತ್ತಿದ್ದನು.

ಆದರೆ ಇವರಿಬ್ಬರಿಗೂ ತಮ್ಮ ವಿಚಾರಗಳನ್ನು ಪ್ರಕಟಿಸಲಿಕ್ಕೆ ಪಂತನು ಅವಕಾಶವನ್ನೇ ಕೊಡಲಿಲ್ಲ. ತಾನೇ ದಾವಲನ ಪರವಾಗಿ ಹೇಳಿ ಬಿಟ್ಟ. ತನ್ನ ಮಾತು ದಾವಲನ ಮಾತುಗಳಾಗಿವೆಯೆಂಬ ಭಾವವನ್ನು ಪ್ರದರ್ಶಿಸಿದ. ಅವನೊಡನೆ ಆಲೋಚಿಸಿಯೇ ತಾನು ಹೇಳುತ್ತಿರುವಂತೆ ನಟಿಸಿದ. ಪಂತನ ಮಾತಿನ ಭಾವ ಹೀಗಿದ್ದಿತು...."ಬೀರನು ಇಬ್ಬರ ಕಾಗದಗಳ ರಜಿಸ್ಟರದ ಖರ್ಚು, ತಾಲೂಕಿಗೆ ಹೋಗಿ ಬರುವ ವೆಚ್ಚ ನೋಡಿಕೊಳ್ಳಬೇಕು. ಯುಗಾದಿ ಆದ ತರುವಾಯ ಬೀರ ಬಾವಿಯ ಕೆಲಸ ಆರಂಭಿಸಬಹುದು. ಅದರಿಂದ ಅವರವರ ಹೊಲದ ಉತ್ಪನ್ನ ಅವರಿಗೆ ಈ ವರ್ಷ ಸೇರುವುದು. ಬೀರನಿಗೆ ಈಗಲೇ ಹೊಲವು ಸ್ವಾಧೀನವಾಗಬೇಕಿದ್ದರೆ ಹಾಗೂ ಮಾಡಿಕೊಳ್ಳಬಹುದು. ರಜಿಸ್ಟರ ಆದ ಮರು ದಿನದಿಂದ ತಮ್ಮ ತಮ್ಮ ಹೊಸ ಹೊಲಗಳಲ್ಲಿ ತಾವು ಹೋಗಬಹುದು. ಆಯಾ ಹೊಲಗಳ ಬೆಳೆಗಳನ್ನೂ ತಾವೇ ತಕ್ಕೊಳ್ಳಬೇಕಾಗುವದು. " ಈ ವಿಚಾರಕ್ಕೆ ಬೀರ ಒಮ್ಮೆಲೇ ಒಪ್ಪುವದಿಲ್ಲವೆಂದು ಪಂತನಿಗೆ ಗೊತ್ತಿದ್ದಿತು. ದಾವಲನಿಗೂ ಗೊತ್ತಿದ್ದಿತು. ಬೀರ ಒಪ್ಪದಿದ್ದರೆ ಎಲ್ಲಿ ಈ ವ್ಯವಹಾರವೇ ನಿಲ್ಲುವುದೇನೋ ಎಂದು ದಾವಲ ಹೆದರಿದ್ದ. ಆದರೂ ತನ್ನ ಒಡೆಯನ ಎದುರಿಗೆ ಸ್ಪಷ್ಟವಾಗಿ ಮಾತನಾಡಿದ್ದಕ್ಕೆ ಸುಮ್ಮನಾಗಿಬಿಟ್ಟ.

ಬೀರನಿಗೆ ಪಂತರು ಹೀಗೇಕೆ ಮಾತನಾಡುವರೆಂಬುದು ಗೊತ್ತಾಯಿತು. ಆದರೂ ಆತ ವಿಚಾರಮಾಡಿ ತಿಳಿಸುವೆನೆಂದು ಹೇಳಿ ಮನೆಗೆ ಹೋದ.

"ನಿನ್ನ ಹೊಲದ ಅಗತ್ಯವಿದೆ ಅವನಿಗೆ. ಎಲ್ಲಿ ಹೋಗುವ. ಮೂರು ಎಕರೆ ಕೊಟ್ಟು ಐದು ಎಕರೆ ತಕ್ಕೊಳ್ಳಲಿಕ್ಕೆ ಅವನದೇನು ಹೋಗತದೆ ? ನೀ ಸುಮ್ಮನಿರು. ನಾನೆಲ್ಲ ಮಾಡಿಸಿಕೊಡುವೆ'' ಎಂದು ಪಂತ ದಾವಲನಿಗೆ ಆಶ್ವಾಸನ ಕೊಟ್ಟು ಕೆಲಸಕ್ಕೆ ಕಳಸಿಕೊಟ್ಟ.

ಬೀರ ಮತ್ತೆ ಚಿಂತೆಗೆ ಒಳಗಾದ. ತಾನು ಪಂತನಿಗೆ ಗಿಡಗಳನ್ನು ಕೊಡಲಿಕ್ಕೆ ಒಪ್ಪದುದರಿಂದ ಅವನು ದಾವಲನ ಕಡೆಗಾಗಿ ಮಾತಾಡಿದ ನೆಂಬುದು ಅವನಿಗೆ ಗೊತ್ತಾಯಿತು. ಆದರೂ ಆ ಮರಗಳನ್ನು ಪಂತನಿಗೆ ಲಂಚವೆಂದು ಕೊಡಲಿಕ್ಕೆ ಅವನು ಮನಸ್ಸು ಮಾಡಲಿಲ್ಲ. ಈಗ ಪಂತನು ಹೇಳಿದ ಮಾತಿಗೆ ಒಪ್ಪಿ ಹೊಲವನ್ನು ವಿನಿಮಯ ಮಾಡಿಕೊಳ್ಳಬೇಕೋ ಇಲ್ಲವೆ ಬಿಟ್ಟುಬಿಡಬೇಕೋ ಎಂಬ ನಿರ್ಣಯ ಮಾಡುವುದೊಂದೇ ಉಳಿದಿದ್ದಿತು. ಊರಲ್ಲಂತೂ ಈಗಾಗಲೇ ಬೀರ ಬಾವಿ ತೊಡುವನೆಂದು ಸುದ್ದಿ ಹರಡಿದ್ದಿತು. ಕಂಡವರೆಲ್ಲ ಬಾವಿಯ ವಿಷಯ ಕೇಳುವವರೇ. ಅವರಲ್ಲಿ ಕೆಲವರಿಗೆ ಬೀರ ಸ್ವಲ್ಪ ಆಷ್ಮತೆಯಿಂದಲೇ ತನ್ನ ಬಾವಿ ತೋಡುವ ಸಂಗತಿ ಯನ್ನು ಮಂಡಿಸಿದ್ದ. ತನ್ನ ಆದರ್ಶವನ್ನೂ ವಿವರಿಸಿದ್ದ. ಅದರಿಂದ ಈಗ ಯಾವುದಕ್ಕೂ ಅವನು ಹಿಂದೆ ಸರಿಯುವಂತಿರಲಿಲ್ಲ. ಹಿಡಿದ ಕಾರ್ಯ ವನ್ನು ಅರ್ಧಕ್ಕೇ ಬಿಟ್ಟು ಹೇಡಿ ಎಂದೆನಿಸಿಕೊಳ್ಳಲಿಕ್ಕೆ ಅವನ ಮನಸ್ಸು ಒಪ್ಪದು. ಸದ್ಯಕ್ಕೆ ಸ್ವಲ್ಪ ಹಾನಿಯಾದರೂ ಮುಂದೆ ಲಾಭದಾಯಕವಾ ಗುವ ತನ್ನ ಯೊಜನೆಯನ್ನು ಬಿಟ್ಟುಕೊಡಲಿಕ್ಕೆ ಒಪ್ಪಲಿಲ್ಲ.

ಚಿನ್ನವ್ವ ಪತಿಗೆ ತಿಳಿಸಿಹೇಳಿದಳು: ಹೊಲ ಬದಲು ಮಾಡಿಕೊಳ್ಳಲಿಕ್ಕೆ ನೂರಾರು ರೂಪಾಯಿವೆಚ್ಚ ಮುನ್ನೂರು ನಾನೂರು ರೂ. ಗಳು ಬೆಳೆಯಲ್ಲಿ ಹಾನಿ, ಇದು ನನಗೆ ಬೇಡ. ನಮ್ಮ ಹೊಲ ನಮಗಿರಲಿ. ಅದೇ ಹಣದಿಂದ ಮಕ್ಕಳ ಮದುವೆಮಾಡಿ ಸುಖದಿಂದ ಇರೋಣ. ಜನರ ಮುಂದೆ ಮಾತಾಡಿರುವೆವೆಂದು ಹಾನಿ ಮಾಡಿಕೊಳ್ಳುವುದು ತಕ್ಕದೆ ? ಅಭಿಮಾನಕ್ಕೆ ಬಿದ್ದು ಹಾಳು ಬಾವೀ ಬಿದ್ದರೆ ಕೈಕಾಲು ಮುರಿದುಕೊಳ್ಳುವವರು ನಾವೇ ಅಲ್ಲವೆ ?

ಬೀರನ ಹೆಂಡತಿ ಹೀಗೆ ವಿರೋಧಿಸಿದರೂ ಮದುವೆಗೆ ಬಂದ ಅವನ ಮಕ್ಕಳು ತಂದೆಯ ಮಾತಿಗೆ ಎದುರಾಡಲಿಲ್ಲ. ತಂದೆಯ ಕಾರ್ಯ ಈಗ ಹಾನಿಕರವಾಗಿದ್ದರೂ ಅದನ್ನು ತಾವು ದುಡಿದು ಬೆಳೆಸಲಿಕ್ಕೆ ತೊಟವೊಂದು ಸಿಗುವದೆಂಬ ಕನಸನ್ನು ಕಂಡರಾತರುಣರು. ಅದರಂತೆ ತಾವು ತಂದೆಯ ಕಾರ್ಯವನ್ನು ಕಟುವಾಗಿ ವಿಮರ್ಶಿಸಿದರೆ ದುಡಿಯಲಿಕ್ಕೆ ಒಲ್ಲದುದಕ್ಕೆ ಮಕ್ಕಳು ಹೀಗೆ ಮಾತಾಡುವರೆಂದು ತಂದೆಯು ತಿಳಿದುಕೊಳ್ಳಬಹುದೆಂದು ವಿಚಾರಿಸಿ ಸುಮ್ಮನಾದರು.

ಮಕ್ಕಳಲ್ಲಿ ಮಾಡುವ ಹುಮ್ಮಸ್ಸಿದೆ. ಹೆಂಗಸಿಗೆ ಧೈರ್ಯ ಸಾಲದು. ಅವಳ ಮಾತನ್ನೇನು ಕೇಳುವುದು ? ಎಂದುಕೊಂಡು ಬೀರ ಮುಂದು ವರಿದ. ಆಗ ತನ್ನಲ್ಲಿಯೇ ಒಂದು ವಿಚಾರವನ್ನು ಮಾಡದೆ ಮಾತ್ರ ಇರ ಲಿಲ್ಲ. ದಾವಲನು ತನ್ನ ಡೋಣೀ ಹೊಲದಲ್ಲಿ ಯಾವ ಮಗ್ಗಲಿಗೊ ಮೂರು ಎಕರೆ ಹೊಲ ತಕ್ಕೊಳ್ಳಬಹುದು. ಸ್ವಲ್ಪ ಹೊಳೆ ಏರಿದ ಕೂಡಲೇ ನೀರುಣ್ಣುವ ಹೊಲದ ಭಾಗ ತಕ್ಕೊಂಡರೂ ಅಷ್ಟೆ; ಉಳಿದ ಇನ್ನೊಂದು ಭಾಗ ಹಿಡಿದರೂ ಅಷ್ಟೆ. ನೀರು ಸಿಲ್ಲದ ಭಾಗದಲ್ಲಿಯೇ ದೊಡ್ಡ ದೊಡ್ಡ ನಾಲ್ಕು ಮರೆಗಳಿದ್ದುವು. ಅವುಗಳ ಬೆಲೆ ಈಗ ಆರೇಳು ನೂರು ರೂಪಾಯಿ ಯಾಗುವುದು. ಆ ಗಿಡಗಳ ಆಶೆಗೆ ಬಿದ್ದು, ಆ ಭಾಗ ಹಿಡಿದರೆ ತನಗೆ ಒಳ್ಳೆಯ ನೆಲ ಉಳಿಯುವುದು. ಇಲ್ಲ, ಒಳ್ಳೆಯ ನೆಲ ಹೋದರೆ ಗಿಡಗಳು ತನ್ನ ಪಾಲಿಗೆ ಇರುವುವು. ದೈವದಲ್ಲಿ ಇದ್ದದ್ದು ಉಳಿಯಲೆಂದು ಭಾವಿಸಿ, ಪಂತರಿಗೆ ನಾಲ್ಕು ಜನರ ಎದುರಿಗೆ ಮಾತುಕೊಟ್ಟು ಬಂದ. ಅದನ್ನರಿತು ದಾವಲನಿಗೂ ಸಂತಸವಾಯಿತು. ಮನದಲ್ಲಿಯೇ ಪಂತರ ಚಾತುರ್ಯಕ್ಕೆ ತಲೆದೂಗಿದ. ಆ ಹುಮ್ಮನಸ್ಸಿನಲ್ಲಿ ಪಂತರ ಹೊಲದಲ್ಲಿ ದಿನಕ್ಕೆ ಎರಡಾಳಿ ನಷ್ಟು ದಾವಲ ದುಡಿಯದಿರಲಿಲ್ಲ.

ಬೀರನ ಮನೆತನದಲ್ಲಿಯೇ ಒಂದು ನವಚೇತನ ಉಂಟಾದಂತಾಯಿತು. ಮನೆಯವರೆಲ್ಲರೂ ಕೂಡಿಕೊಂಡು ಹೋಗಿ ತಮಗೆ ಬರುವ ಹೊಸ ಹೊಲವನ್ನು ಮತ್ತೊಮ್ಮೆ ನೋಡಿಕೊಂಡು ಬಂದರು. ಎಲ್ಲಿ ಬಾವಿ ತೆಗೆ ಯಬೇಕು, ಯಾವ ಮಗ್ಗಲಿಗೆ ಯಾತದ ಕಟ್ಟೆ ಹಾಕಬೇಕು, ಎಲ್ಲೆಲ್ಲಿ ಯಾವ ಯಾವ ಬೆಳೆ ಮಾಡಬೇಕು ಇವನ್ನೆಲ್ಲ ಲೆಕ್ಕ ಹಾಕಿದರು. ಆಗೆಲ್ಲ ಬೀರನ ಉತ್ಸಾಹ ಹೇಳತೀರದು. ತೋಟದಲ್ಲಿ ಗೊಬ್ಬರದ ಅವಶ್ಯಕತೆ ಇದೆಯೆಂದು ಈಗಾಗಲೇ ತನ್ನ ಮಕ್ಕಳನ್ನು ಹಚ್ಚಿ, ಹತ್ತಿಪ್ಪತ್ತು ಬಂಡಿ ಗೊಬ್ಬರ ಒಯ್ದು, ಹೊಲದಲ್ಲಿ ಒತ್ತಟ್ಟಿಗೆ ಕೂಡಹಾಕಿಸಿದನು. ಬಾವಿ ಯನ್ನು ತೋಡಲಿಕ್ಕೆ ಬೇಕಾಗುವ ಹಾರಿ, ಗುದ್ದಲಿ, ಹೆಡಿಗೆ ಬುಟ್ಟಿಗಳನ್ನು ಸಂತೆಯಿಂದ ಕೊಂಡು ತರಿಸಿದನು. ನೆರಿಯೂರದ ಒಡ್ಡರನ್ನು ಕರೆದು ತಂದು, ಬಾವಿಯನ್ನು ತೋಡುವುದಕ್ಕೆ ಗುತ್ತಿಗೆ ಕೊಟ್ಟನು. ಅದರ

ಕರಾರು ಪತ್ರವನ್ನು ಕೂಡ ಪಂತರಿಂದಲೇ ಬರೆಯಿಸಿ, ಕೆಲಸಗಾರರಿಗೆ ಇನ್ನೂರು ರೂಪಾಯಿಗಳನ್ನು ಮುಂಗಡಕೊಟ್ಟನು. ಆ ಕಾಲಕ್ಕೆ ಬಾವಿಯ ಕೆಲಸದಲ್ಲಿ ತಾನೂ ತನ್ನೊಬ್ಬ ಮಗನೂ ಇರತಕ್ಕವರೆಂದೂ ಅದಕ್ಕಾಗಿ ಗುತ್ತಿಗೆಯವರಿಗೆ ತಮ್ಮಾಳಿನ ಹಣವನ್ನು ಹಿಡಿದುಕೊಂಡೇ ಕೊಡತಕ್ಕವರೆಂದೂ ಪಂತನ ಸಮಕ್ಷಮ ಮಾತುಮಾಡಿದನು. ಬೀರನ ಯುಕ್ತಿಯನ್ನು ಕಂಡು ಪಂತನು ಮನದಲ್ಲಿಯೇ ನಗುವ. ಒಕ್ಕಲಿಗನ ಆನೆ ಹೋದರೂ ಕೇಳುವುದಿಲ್ಲ, ಬಾಲಕ್ಕೆ ಬಡಿದಾಡುವ ಎಂದು ಮನದಲ್ಲಿಯೇ ಅಂದುಕೊಂಡು ನಕ್ಕ.

ಸದ್ಯ ಬೀರನ ಹತ್ತರಿದ್ದ ಹಣವೆಲ್ಲ ತೀರಿತು. ಇನ್ನು ಸರಕಾರದವರಿಂದ ಸಾಲದ ದುಡ್ಡು ಸಿಕ್ಕಮೇಲೆ ಮುಂದಿನ ಕೆಲಸ ನಡೆಯಬೇಕು. ಅದಕ್ಕಾಗಿ ಪಂತನನ್ನು ಒಂದೆರಡು ಸಲ ಕೇಳಿದ ಬೀರ. ಆಗ ಪಂತ ಬೀರನಿಗೆ ಹೇಳಿದ—

" ಈಗಲೇ ಅವಸರ ಮಾಡಿ ಉಪಯೋಗವಿಲ್ಲ. ಮೊದಲು ಹೊಲದ ವಿನಿಮಯದ ಕಾಗದ ಮಾಡಿಕೊಂಡು ಬರೋಣ. ಆ ಮೇಲೆ ಆ ಹೊಲದ ನಂಬರು ಮೊದಲಾದವುಗಳನ್ನು ಹಾಕಿ ಅರ್ಜಿ ಮಾಡಬೇಕು. ಅಂದರೆ ಸರಕಾರದವರು ನೋಡಿಕೊಂಡು ಹೋಗುವರು. ಅವರು ಪಾಸುಮಾಡಿದ ಮೇಲೆ ತಿಂಗಳೆರಡು ತಿಂಗಳಲ್ಲಿ ಹಣ ಸಿಗುವುದು. ಸರಕಾರದ ಹಣವೇನು ಹಾದಿಯ ಮೇಲೆ ಬಿದ್ದಿದೆಯೇ ? ನಾಲ್ಕೆಂಟು ದಿನ ಹೋಗಲಿ. ಒಂದುದಿನ ಸವಡು ಮಾಡಿ ತಾಲೂಕಿಗೆ ಹೋಗಿಬರೋಣ. "

ಬೀರ ಸುಮ್ಮನಾದ. ಉತ್ಸಾಹ ತಗ್ಗಿತು. ನಾಲ್ಕೆಂಟು ದಿನ ತನ್ನ ಹೊಲಗಳ ಸುಗ್ಗಿಯ ಕೆಲಸಕ್ಕೆಂದು ಮನಸ್ಸು ತೊಡಗಿಸಿದ. ತನ್ನ ಒಬ್ಬ ಮಗ ಮನೆತನದ ಒಕ್ಕಲತನ ನೋಡುವ. ತಾನು ಇನ್ನೊಬ್ಬ ಮಗನೊಡನೆ ಬಾವಿಯ ಕೆಲಸಕ್ಕೇನೇ ಮೀಸಲೆಂದು ಆತ ಯೋಚಿಸಿದ್ದ. ಸದ್ಯಕ್ಕೆ ಬಾವಿಯ ಕೆಲಸ ಇಲ್ಲವಾಯಿತು. ಎಲ್ಲರೂ ಒಕ್ಕಲತನಕ್ಕೆ ತೊಡಗಿದರು.

ಹತ್ತೆಂಟು ದಿನಗಳು ಉರುಳಿದವು. ಊರೊಳಗಿನ ಐದಾರು ತಾಲೂಕಿಗೆ ಹೋಗಬೇಕಾದ ಕೆಲಸಗಳು ಕೂಡಿದ ಮೇಲೆ ಪಂತನು ಬೀರನಿಗೆ ಹೇಳಿ ಕಳಿಸಿದ. ಇನ್ನೆರಡು ದಿನಗಳಲ್ಲಿ ಕಚೇರಿಗೆ ಹೋಗತಕ್ಕದ್ದು. ವೆಚ್ಚದ ಹಣ ಸಿದ್ಧವಿರಲಿ ಎಂದು. ಆದರಂತೆ ಬೀರನೂ ಸಿದ್ಧತೆಯಲ್ಲಿಯೇ ಇದ್ದ. ಮನೆಯಲ್ಲಿ ಚೆನ್ನವನಿಗೆ ಹೇಳಿ, ಪಂತನಿಗಾಗಿ ಸಿಹಿಸಿಹಿ ತಿಂಡಿಯನ್ನು ಮಾಡಿಸಿಕೊಂಡ. ಪಂತನೂ ಕೂಡ ಚಾವಡಿಗೆ ಹೋಗಿ ಹೊಲಗಳ ನಂಬರು, ತೆರಿಗೆಯು ಹಣ ಎಷ್ಟು? ಮೊದಲಾದವುಗಳನ್ನು ಟಿಪ್ಪಣಿ ಮಾಡಿಕೊಂಡ. ದಾವಲನನ್ನು ಕರೆದುಕೊಂಡು ಕಚೇರಿಯ ದಾರೀ ಹಿಡಿದ. ಎಲ್ಲರ ಹೋಗುಬರುವ ವೆಚ್ಚವನ್ನೂ ಮೊದಲೇ ನಿಶ್ಚಯಿಸಿದ ಪ್ರಕಾರ ಬೀರನೇ ನೋಡಿಕೊಂಡ.

ಸಬ್‌ರಜಿಸ್ಟ್ರಾರರ ಕಚೇರಿಯಲ್ಲಿ ಕಾಗದ ರಜಿಸ್ಟರ ಮಾಡುವ ಕಾಲಕ್ಕೆ ರೈತರಿಬ್ಬರಿಗೂ ಕಾಗದಗಳನ್ನು ಓದಿ ಹೇಳಲಾಯಿತು. ದಾವಲನ ಲಕ್ಷ್ಯ ಅತ್ತ ಇರಲಿಲ್ಲ. ಪಂತರ ಮನೆಯ ಆಳು ಆತ. ಪಂತರೇ ಎದುರಿಗೆ ಇರುವಾಗ ತಾನು ಕೇಳುವುದೇನು ಎಂದು ಭಾವಿಸಿದ್ದ. ಕಾಗದ ಓದುವಾಗ ಬೀರನಿಗೆ ಏನೋ ಸಂಶಯ ಬಂದಂತಾಯಿತು. ಕೇಳಲಿಕ್ಕೆ ಬಾಯ್ದೆರೆದ.

“ ಹಾಗೇ ಬರೆಯಬೇಕಾಗ್ತದ, ಮುಂದೆ ಕೇಳು ” ಎಂದು ಹೇಳಿ ಪಂತರು ಸುಮ್ಮನಾಗಿಸಿದರು. ಪಂತರೇ ಮುಂದೆ ಕುಳಿತು ಬರೆಯಿಸಿದ್ದಾರೆಂದ ಮೇಲೆ ಇರಬೇಕು, ತನ್ನ ತಿಳುವಳಿಕೆಯಂತೆ ಸರಿಯಾಗಿಯೇ ಇರಬೇಕು ಎಂದು ಬೀರನು ಸುಮ್ಮನಾದ. ಕಾಗದದ ಮೇಲೆ ಸರಕಾರದ ಮುದ್ರೆ ಬಿದ್ದಿತು. ಕೆಲಸ ತೀರಿತೆಂದು ಎಲ್ಲರೂ ಆನಂದದಿಂದ ಊರಿಗೆ ಬಂದರು.

ನಾಲ್ಕಾರು ದಿನಗಳು ಕಳೆದ ಮೇಲೆ ಡೋಣೀ ಹೊಲದೊಳಗಿನ ಗಿಡಗಳನ್ನು ಕಡಿಸಲಿಕ್ಕೆ ಪಂತ ಆಳುಗಳನ್ನು ಕಳಿಸಿದ. ಬೀರನ ಮಗ ಅದನ್ನು ಕಂಡು ಓಡಿ ಮನೆಗೆ ಬಂದು ತಂದೆಗೆ ಹೇಳಿದ. ಅವನು ಗಿಡಗಳು ತಮ್ಮ ಪಾಲಿನ ಹೊಲದಲ್ಲಿ ಇವೆಯೆಂದು ಈ ಮೊದಲು ತಂದೆ

ಯನ್ನು ಕೇಳಿ ತಿಳಿದುಕೊಂಡಿದ್ದ. ಮಗನ ಮಾತನ್ನು ಕೇಳಿ, ಬೀರನಿಗೂ ದಿಗಿಲುಂಟಾಯಿತು. ಪಂತ ಮನೆಗೆ ಓಡಿಹೋದ. ಪಂತ ಗಂಭೀರವಾಗಿಯೇ ಹೇಳಿದ.

"ಅವು ದಾವಲನ ಪಾಲಿಗಿವೆ. ಅದಕ್ಕೇ ಆಳುಗಳನ್ನು ಕಳಿಸಿದೆ, ನಿನ್ನ ಗಿಡಗಳಿಗೆ ಕೈಹಚ್ಚಲಿಕ್ಕೆ. ಮುಂಚೆಯೇ ಒಂದು ಮಾತು ಕೇಳಿ ನೋಡಿದ್ದೆನಲ್ಲ ನಿನ್ನ ?"

ಕೊನೆಗೆ ಪ್ರಶ್ನೆ ಹಾಕಿ ಪಂತ ಮಾತು ಮುಗಿಸಿದ. ಬಾಯೊಳಗಿನ ತಾಂಬೂಲವನ್ನು ಮತ್ತೆ ಜಗಿಯಲಿಕ್ಕೆ ಆರಂಭಿಸಿದ.

ಬೀರ ಮನೆಗೆ ಬಂದು ಮಗನಿಗೆ ನಡೆದ ಸಂಗತಿಯನ್ನು ತಿಳಿಸಿದ. ಅದರೊಡನೆ ನೀರುಣ್ಣುವ ಜಮೀನು ನನ್ನ ಪಾಲಿಗೆ ಉಳಿಯಿತು, ನೆಟ್ಟ ಗಾಯಿತೆಂದೂ, ಉಪ್ಪು ಕಾರ ಹಚ್ಚಿ ಮಕ್ಕಳಿಗೆ ಹೇಳಿದ. ಇದು ತೋಟ, ಅದು ಹೊಳೆಯ ನೀರುಣ್ಣುವ ಜಮೀನು. ಬರಗಾಲೆಂಬುದೇ ನಮಗಿಲ್ಲ. ಎಂದು ಪ್ರತಿಪಾದಿಸಿದ. ಮಕ್ಕಳು ಸುಮ್ಮನಾದರು. ಚಿನ್ನವ್ವಮಾತ್ರ ಸಂಶಯ ಎತ್ತಿದಳು.

"ಕಚೇರಿಯಿಂದ ಬಂದ ದಿನ ಗಿಡಗಳಿದ್ದ ಪಾಲು ನಮ್ಮದು ಎಂದಿರಿ. ಈಗ ಹೊಳೆ ಮುಳುಗುವ ಹೊಲ ನಮ್ಮದು ಎನ್ನುವಿರಿ! ಯಾವುದು ನಿಜವೋ ಏನೋ! ಈಗ ಗಿಡಗಳನ್ನು ಕಡಿದು ಒಯ್ಯುವರು. ನಾಳೆ ಅದೇ ಪಾಲು ನಿನ್ನದು ಅಂದರೆ ?"

"ಅದೇನು ಹುಡುಗಾಟಿಕೆ ಇದೆ ಏನು ? ಸರಕಾರದಲ್ಲಿ ಕಾಗದಪತ್ರ ಆಗೇದ, ನಾಲ್ಕು ಕಡೆ ಚಕಬಂದಿ ಹಚ್ಚಿ."

ಬೀರ ಹೆಂಡತಿಗೆ ಸಮಾಧಾನ ಹೇಳಿದ. ಆದರೆ ಅವನಿಗೇ ಸಮಾಧಾನವಾಗಲಿಲ್ಲ. ಆದರೂ ಕಾಗದ ಬರುವ ವರೆಗೆ ಏನೂ ತಿಳಿಯುವಂತಿರಲಿಲ್ಲ.

ನಡುವೆ ಬಾವಿಯ ಕೆಲಸಗಾರರು ಬಂದು ಎಡತಾಕ ಹತ್ತಿದರು. ಸರಕಾರದ ಸಾಲಕ್ಕಾಗಿ ಅರ್ಜಿ ಹಾಕಲಿಕ್ಕೆ ಪಂತನ ಕಡೆಗೆ ಬೀರ ಹೋದ. ಆಗ ಪಂತ ಹೇಳಿದ—"ನಿಮ್ಮ ಕಾಗದ ಬರಲಿ! ಚಾವಡಿಯೊಳಗಿನ ನಿಮ್ಮ

ನಿಮ್ಮ ಖಾತೆಗಳಿಗೆ ದಾಖಲ ಮಾಡೋಣ. ಅನಂತರ ನಿನ್ನ ಖಾತೆಯ ನಕ್ಕಲು ತೆಗೆದುಗೊಡುವೆ. ಅದನ್ನು ಜೊತೆಗೆ ಇಟ್ಟು ಅರ್ಜಿ ಮಾಡಬೇಕು. ಅಂದರೆ ಸಾಲ ಮಂಜೂರು ಆಗುವುದು." ಈ ಮಾತಿನಿಂದ ಬೀರ ಮತ್ತಿಷ್ಟು ಅಧೀರನಾಗಿ ಕಾಗದ ಬರುವ ದಾರೀ ಕಾಯಹತ್ತಿದ. ದಿನಾಲು ಅಂಚೆಯ ಆಳಿಗೆ ಕೇಳಹತ್ತಿದ. ಕಾಗದ ಬಂದೊಡನೆಯೆ ತಂದು ಕೊಡು ನಿನಗೆ ನಾಲ್ಕಾರು ಆಣೆ ಮೆಚ್ಚು ಕೊಡುವೆನೆಂದೂ ಆಶೆ ಹಚ್ಚಿಬಿಟ್ಟ.

ಬಾವಿಯನ್ನು ಗುತ್ತಿಗೆ ಹಿಡಿದವರು ದಿನಾ ಬೆಳಗಾದರೆ ಬೀರನ ಮನೆಗೆ ಎಡತಾಕಹತ್ತಿದರು. ಬಾವಿಯ ಕೆಲಸ ತೋರಿಸು, ಇಲ್ಲ ನಾವು ಎರಡನೆಯವರ ಕೆಲಸ ಹಿಡಿಯುವೆವು ಎಂದು ದುಂಬಾಲಬಿದ್ದರು. ಅವರಿಗೆ ಹೇಳಿಸಲಿಕ್ಕೆಂದು ಬೀರ ಪಂತನ ಹತ್ತರ ಕರೆದುಕೊಂಡು ಹೋದ. ಆಗ ಕೆಲಸಗಾರರಿಗೆ ಪಂತ ಹೇಳಿದ—"ಸದ್ಯ ನಮ್ಮ ಕೊಟ್ಟಿಗೆಯ ಕೆಲಸ ಆರಂಭಿಸಿರಿ! ಕಟ್ಟಿಗೆಯಂತೂ ಬಂದು ಬಿದ್ದಿವೆ. ಬೀರನ ಬಾವಿಯ ಕೆಲಸ ಆರಂಭ ಆದಾಗ ಅಲ್ಲಿ ಹೋದೀರಂತ. ಈಗ ಅವನು ಕೊಟ್ಟ ಎರಡುನೂರು ರೂಪಾಯಿ ಕಳೆಯುವ ತನಕ ಇಲ್ಲಿ ದುಡಿಯಿರಿ!"

ಪಂತರ ಮಾತಿಗೆ ಬೀರ ನಡುವೆ ಏನನ್ನೋ ಹೇಳಬೇಕೆಂದ. ಅಷ್ಟರಲ್ಲಿ ಕೆಲಸಗಾರರೇ ಮುಂದಾಗಿ ಒಪ್ಪಿಕೊಂಡು ಬಿಟ್ಟರು. ಒಪ್ಪಿದಂತೆ ಮರು ದಿನದಿಂದ ಪಂತರಲ್ಲಿ ಕೆಲಸಕ್ಕೂ ಆರಂಭಿಸಿದರು.

ಮುಂದೆ ಒಂದೆರಡು ದಿನಗಳಲ್ಲಿ ಸರಕಾರದ ಕಚೇರಿಯಿಂದ ದಾವಲನಿಗೂ ಬೀರನಿಗೂ ಎರಡು ಲಕ್ಕೋಟಿಗಳು ರಜಿಸ್ಟರ ಆಗಿ ಬಂದುವು. ಆನಂದದಿಂದ ಇಬ್ಬರೂ ಹೆಬ್ಬರಳಿನ ಮುದ್ರೆಯೊತ್ತಿ ಕೊಟ್ಟು, ಅಂಚೆಯಾಳಿಗೆ ನಾಲ್ಕಾರು ಆಣೆಗಳನ್ನು ಚಹಕ್ಕೆ ಕೊಟ್ಟು, ತಕ್ಕೊಂಡರು. ದಾವಲ ಕಾಗದ ಒಯ್ದು ಪಂತರ ಕೈಯಲ್ಲಿ ಕೊಟ್ಟ. ಬೀರ ಮನೆಗೆ ಬಂದು, ಕನ್ನಡ ನಾಲ್ಕು ತರಗತಿ ಓದಿದ ತನ್ನ ಹಿರಿಯ ಮಗನ ಕೈಯಿಂದ ಓದಿಸಿ ಕೇಳಿದ. ಹೊಲದ ಪಾಲುಗಳು ಯಾವ ರೀತಿ ಆದವೆಂಬ ಕಲ್ಪನೆ ಒಮ್ಮೆಲೇ ಅವನಿಗೆ ಬರಲಿಲ್ಲ. ಚೆನ್ನವ್ವನು ಲಕ್ಷ್ಯಗೊಟ್ಟು ಕೇಳಿದ್ದರೂ ಅವಳಿಗೂ ಹೊಳೆಯಲಿಲ್ಲ. ದಂಪತಿಗಳಿಬ್ಬರೂ ಗೊಂದಲದಲ್ಲಿ ಬಿದ್ದವರಂತೆ ಹುಡುಗನ ಮುಖದ ಕಡೆಗೆ ನೋಡಹತ್ತಿದರು.

" ಹೀಗೇಕೆ ಹೊಲ ಒಡೆದಿರಿ ? "

ಮದುವೆಗೆ ಬಂದ ಮಗ ತಂದೆಗೆ ಕೇಳಿದ.

" ಹೇಗೆ ಬರೆದಿದೆ ? " ತಂದೆಯ ಪ್ರಶ್ನೆಯಿದು !

ಮಗ ಇದ್ದಲಿಯ ಚೂರೊಂದನ್ನು ತಂದು, ನೆಲದ ಮೇಲೆ ತಮಗೆ ಉಳಿದ ಡೋಣಿಯ ಹೊಲದ ನಕ್ಷೆಯನ್ನು ಬರೆದು ತೋರಿಸಿದ. ಮೂರ, ಎಕರೆ ಹೊಲ ಮೂರು ತುಂಡಾಗಿ ಉಳಿದಿದ್ದಿತು. ದಾವಲನಿಗೆ ಅಖಂಡ ವಾಗಿದ್ದಿತು. ಅದು ಹೆಚ್ಚು ನೀರುಣ್ಣುವದೂ ಆಗಿತ್ತಲ್ಲದೆ, ಅದರಲ್ಲಿಯೇ ಆ ನಾಲ್ಕು ಹೆಮ್ಮರಗಳೂ ಬಂದಿದ್ದವು !

ಬೀರನ ಕಣ್ಣುಗಳು ಕೆಂಪಾದುವು. ತುಟಿಗಳು ಅದುರಿದವು. ಕೆರಳಿದ ಕಾದ ರಕ್ತ ನೆತ್ತಿಗೇರಿತು. ನೆಟ್ಟಗೆ ಪಂತನ ಮನೆಗೆ ಹೋಗಿ ಕೇಳಿದ—

" ಇದೇನ ಹೊಲಸ ಕೆಲಸ ಮಾಡಿದಿರಿ ? ಬಡವನ ಕುತ್ತಿಗೆ ಕೊಯ್ಯುವ ಕೆಲಸ ನಿಮ್ಮದು ? "

ಶಾಂತನಾಗಿಯೇ ಪಂತರು ನುಡಿದರು—

" ನಿನಗೆ ಬೇಡವಾಗಿದ್ದರೆ ನಿನ್ನ ಹೊಲ ನೀ ತಿರುಗಿ ಮಾಡಿಕೊಳ್ಳು ಹೋಗು ! ದಾವಲನಿಗೆ ಕರೆದು ಹೇಳತೀನಿ. "

ಬೀರನನ್ನು ಹಾಳು ಬಾವಿಯಲ್ಲಿ ಎತ್ತಿ ಒಗೆದಂತಾಯಿತು.

" ಅಯ್ಯೋ ಹಾಳು ಬಾವಿ ! "

ಎಂದು ಕಿರುಚಿದ ಬೀರ.

ಇಂದು ಬೀರ ಊರಲ್ಲೊಬ್ಬ ಹುಚ್ಚ. " ಬಾವೀ ತೋಡುವೆ, ಕಬ್ಬಾ ಹಚ್ಚುವೆ, ಗಾಣ ಹೂಡಿದ ಮೇಲೆ ಊರ ಜನರಿಗೆ ರಸ ಕುಡಿಸುವೆ, ದೊಡ್ಡ ಹೋರೀ ಹೂಡಿದ ಗಾಡಿ ತಂದು ಪಂತನ ಗಾಣಕ್ಕ ಕರದೊಯ್ಯುವೆ ಹ: ! ಹಃ ! ನನ್ನ ತೋಟ ! ನನ್ನ ನನ್ನ ಬಾವಿ ! " ಎಂದು ಬಡಬಡಿಸುತ್ತ ತಿರುಗುವ ಬೀರ.

———

# ಆ ಕಣ್ಣೀರು.

ಮಧ್ಯಾಹ್ನದ ಆರು ತಾಸಿನ ಸಮಯ. ಬಿಸಿಲು ರಣಗುಟ್ಟುತ್ತಿತ್ತು. ಕಲ್ಲವ್ವನು ಉರುವಲ ಹೊರೆಯೊಂದನ್ನು ಹೊತ್ತು ತಂದು, ಗುಡಿಸಲಿನ ಮುಂದೆ ಒಗೆದು ಬೇವಿನ ಗಿಡದ ನೆರಳಿನಲ್ಲಿ ಕುಳಿತು ಉಸ್ಸೆಂದು ಉಸುರುಗರೆದಳು.

ಗುಡಿಸಲಿನೊಳಗಿಂದ ನಾಲ್ಕಾರು ಚಿಕ್ಕ ಮಕ್ಕಳು ಹೊರಗೆ ಹಾತೊರೆದು ಬಂದು, "ಅವ್ವಾ! ಅವ್ವಾ! ರೊಟ್ಟೀ ಕೊಡs; ಹಸಿವಿ ಆಗೇದ" ಎಂದು ಚೀರಹತ್ತಿದವು. ಏನೋ ಧೇನಿಸುತ್ತ ಕಲ್ಲವ್ವ ಕೈಯೂರಿ ಎದ್ದಳು. ಅವಳ ಮುಖದಿಂದ ನಿಟ್ಟುಸಿರೊಂದು ಅವಳಿಗೆ ಗೊತ್ತಿಲ್ಲದೆ ಹೊರಟು ಅದೇ ಬೀಸುತ್ತಿರುವ ಬಿಸಿಗಾಳಿಯಲ್ಲಿ ಬೆರೆದುಹೋಯಿತು. ಮೆಲ್ಲನೆ ಒಳಗೆ ಹೋಗಿ ನೆಲುವಿನ ಮೇಲಿನ ಬುಟ್ಟಿಯನ್ನಿಳಿಸಿ ನೋಡಿದಳು. ಎರಡು ದಿನಗಳ ಹಿಂದಿನ ದುಡ್ಡಿನಳತೆಯ ನಾಲ್ಕಾರು ರೊಟ್ಟಿಯ ತುಣುಕುಗಳು ಬಿದ್ದಿದ್ದವು. ತಂದು ಮಕ್ಕಳ ಕೈಯಲ್ಲಿ ಒಂದೊಂದು ತುಣುಕು ಕೊಟ್ಟಳು. ಆ ಹುಡುಗರು ಅಂಥ ತುಣುಕುಗಳನ್ನು ಆನಂದದಿಂದ ಕಚ್ಚಿ ಕಚ್ಚಿ ತಿನ್ನ ಹತ್ತಿದವು.

ಅಷ್ಟರಲ್ಲಿ ಬಸಪ್ಪನು ಕೆಲಸದಿಂದ ಬಂದ.

"ಬರಲಾಕ ಇಷ್ಟ್ಯಾಕ ವೇಳೆ ಮಾಡ್ದಿ?"

ಕಲ್ಲವ್ವ ಜಗ್ಗಿದ ದನಿಯಿಂದ ಕೇಳಿದಳು.

"ಹಾಂಗs ಗೌಡರ ಮನೀಗೆ ಹೋದ್ನಿ; ಕೂಲಿಯ ನಾಲ್ಕಾಣೆ ತಗೊಂಡು ಬರಬೇಕಂತ."

"ಹುಡುಗ್ರ ಹಸ್ತಿದಾರ ಮನ್ಯಾಗ........ಜೋಳಾನ ಹಾಕ ಅನ ಬಾರದಿತ್ತ?"

ನಡುವೆಯೇ ಮಾತು ಸೇರಿಸಿದಳು ಕಲ್ಲವ್ವ.

"ಹೂಂ! ಜೋಳಾ ಹಾಕ್ತಾರ ಇಂಥಾ ಧಾರಣಿಯೊಳಗ. ಈ ನಾಲ್ಕಾಣೆ ಕೊಡಬೇಕಾದ್ರ 'ಜಳಕಾ ಮಾಡಿದ್ನಿ-ಪೆಟ್ಗಿ ಮುಟ್ಟುವ ಹಂಗಿಲ್ಲ.

ಊಟಾ ಮಾಡಿ ಕೊಡತೇನ ಕೂಡ' ಅಂತಾ ತಾಸಾನುತಾಸ ಕೂಡಿಸಿದ್ರು" ಸ್ವಲ್ಪ ಕೆರಳಿದ ಕಂಠದಿಂದ ನುಡಿದ ಬಸಪ್ಪ.

"ಇಲ್ಲಿ; ಅವರ ಹೊಟ್ಟಿ ತಣ್ಣಗಾಗಲಿ! ಈ ಹೊರಿಯನ್ನರ ಯಾರ ತಗೋತಾರೇನ ಕೇಳ್ರಿ—ಅವ ಇವ ಕೂಡಿಸಿ ಸೇರ ಸೆಜ್ಜಿನಾರ ಬರ್ತಾವೇನ ನೋಡರಿ ಲಗೂನ." ಎಂದು ಹೇಳಿ ಮಣ್ಣಿನ ಕೊಡ ತಕ್ಕೊಂಡು ನೀರಿಗೆ ಹೊರಟಳು ಕಲ್ಲವ್ವ.

"ನಿನ್ನಿಂದ ತಿನ್ನಾಕ ತುತ್ತ ರೊಟ್ಟಿಲ್ಲ, ಬರಿ ಹೊಟ್ಟಿಂದ ಹರಿವತ್ತಿಂದೂ ದುಡಿದ ದುಡಿದ ಕಳ್ಳಳ್ಳಿ ಬಿಟ್ಟ್ಯದ. ಬರೀ ಸಜ್ಜೀಯಿಂದ ಏನಾಗ್ತದ, ಹುಡುಗರಿಗೆ ನಮಗ? ಅಪ್ಪೇರ ಬಹಿಮುಕಾಳ ಹಿಂದೀ ಉಳಿದ ಸಜ್ಜೀ ತರತೇನ."

ಬಸಪ್ಪ ಹೊರೆ ನೆಗೆಯುತ್ತಾ ಒದರಿ ಹೇಳಿದ.

"ಏನಾರ ಮಾಡ್ಕೊಂಬಾ ಲಗೂನ."

"ಹತ್ತಿ ಕಟಿಗಿ ಬೇಕ್ಯಾನ್ರಿ."

ಒಂದು ದೊಡ್ಡ ಬಾಗಿಲ ಮುಂದೆ ನಿಂತು ಕೇಳಿದ ಬಸಪ್ಪ.

"ಹೊತ್ತಿಲ್ದ ಹೊತ್ತಿನೊಳಗ ಈಗ್ಯಾಕೋ ಬಸ್ಯಾ?"

ಉಂಡು ದಿಂಬಿಗೊರಗಿ ವೀಳೆಯನ್ನು ಮೆಲ್ಲುತ್ತ ಕುಳಿತ ರಾಯರ ಪ್ರಶ್ನೆಯಿದು!

"ನಮ್ಮಾಕಿ ಅಡವಿಗೆ ಹೋಗಿ ತಂದಳ್ರಿ ಈಗ........". ರಾಯರು ಉಗುಳಲೆಂದು ಹೊರಗೆ ಬಂದು, ಹೊರೆಯನ್ನು ನಿರೀಕ್ಷಿಸಿ,—

"ಎಲ್ಲಿಂದ ತಂದಳೋ ಇಂಥಾ ಹೊತ್ತಿನಾಗ? ಕುಲಕರ್ಣೇರ ಊರ ಬಡ್ಡಿ ಹೊಲದಿಂದ ತಂದಳೇನ ಮತ್ತ!" ಎಂದು ಗದರಿಸಿದರು.

"ಇರಲಿಕ್ಕಿಲ್ರಿಯಪ್ಪಾ........ಹರಿವತ್ತ ಹೋಗಿದ್ಲು, ಇನ್ನೂ ಹೊತ್ತಿನ ಗೊಂಡಿ ಒಡಿಯೋದಕ್ಕಿಂತ ಮೊದಲ. ದೂರ ಎಲ್ಲಿಂದ್ರ ಕಿತ್ತಿ ತಂದಿರಬೇಕ. ಹೊಟ್ಟಿಗೆ ನಿನ್ನಿಂದೂ ಏನೂ ಇಲ್ಲ; ಇದನ ಮಾರಿ ಏನ್ರ ಇಟ್ಟ ತಿನ್ನಾಕ ಆದೀತಂತ ತಂದಾಳ್ರಿ...."

"ಅದೆಲ್ಲಾ ಹೌದೋ. ಕುಲಕರ್ಣೇರ ಹೊಲದಾಗ ಇಂದೇ ಹತ್ತಿ ಕಟ್ಗಿ ಕಿತ್ತಿದಾರಂತ. ನನಗೊಂದ ಹತ್ತ ಹೊರಿ ಬೇಕಾದ್ರ ಒಯ್ದು ಒಗಿಸಿ

ಕೊಳ್ರಿ ಅಂತ ಹೇಳಿದ್ರು. ಅದಕ್ಕ ಅಂತೇನಿ." ಸ್ವಲ್ಪ ಯೋಚಿಸಿ, "ಹೂಂ! ಏನ ಹೇಳಿದಿ ಹೊರಿಗಿ?"

"ಯಪ್ಪ ನೀವs ನೋಡಿ ಏನಾದ್ರೂ ಬೇಡ್ರಲ್ಲ!"

"ನನಗೇನ ಈಗ ಉರೋಲ್ದ ಜರೂರಿ ಇಲ್ಲ; ಕುಲಕರ್ಣೇರ ಒಯ್ಯಿರಿ ಅಂತ ಹೇಳಿದಾರ ಅನಲಿಲ್ಲ ಈಗ....? ಆದರ ಮನೆ ಮುಟ್ಟ ಬಂದೀದಿ ಅಂದ ಮ್ಯಾಲ ಮೂರ ಆಣೆ ಕೊಡತೇನ ಒಗೆ."

ಅಲ್ರಿ, ದೊಡ್ಡ ಹೊರೆ ಐತಿ. ನಾಲ್ಕ ಆಣೆಯುನ್ನರ ಮಾಡ್ರಿ."

ರಾಯರು ಹಣೆ ಏರಿಸಿ ಏನೋ ಸ್ವಲ್ಪ ವಿಚಾರಿಸಿ,—"ಹೂಂ! ಇಲ್ಲಿ ಒಗೆ ಹೋಗ. ನೀನs ಒಂದ ಆಣೆ ತಿಂದ್ರೂ ತಿನ್ನ ನಮ್ಮವನs ಇದ್ದಿದಿ...."

"ಹೌದ್ರಿಯಪ್ಪ. ಬಡವನ ಹೊಟ್ಟಿಗೆ ಹಾಕಿದ್ರಿ" ಉಪಕೃತ ಸ್ವರದಲ್ಲಿ ನುಡಿದ ಬಸಪ್ಪ.

ರಾಯರು ಒಳಗೆ ಹೋಗಿ ಕೆಲ ಹೊತ್ತಿನ ಮೇಲೆ ರೊಕ್ಕ ತಕ್ಕೊಂಡು ಬಂದು,—

"ಏನೋ ಬಸ್ಯಾ, ಕುಲಕರ್ಣೇರ ಹೊಲದಿಂದ ಹತ್ತೆಂಟ ಹೊರಿ ಹತ್ತಿ ಕಟ್ಗಿ ತಂದ ಒಗಿಯುವಿ ಏನೋ? ಚಹಾಕ್ಕ ನಾಲ್ಕ ದುಡ್ಡ ಕೊಡತೇನಿ" ಸಾವಿರ ರೂಪಾಯಿ ದಾನ ಕೊಡುವವರ ಠೀವಿಯಿಂದ ವಾಗ್ದಾನ ಮಾಡಿದರು, ರಾಯರು.

"ಎಲ್ಲಿ ಚಹಾರಿಯಣ್ಣಾ? ಹೊಟ್ಟೆಗೇನಾದ್ರ ಕಾಳಗೀಳ ಹಾಕ್ರಿ ಸಂಜೀನಾಗ ನಾನೂ ನಮ್ಮಾಕಿನೂ ಬಂದ ತಂದ ಒಗಿತೇವರಿ...."

"ಕಾಳ ಎಲ್ಲಿಂದ ತರಲ್ಯೋ? ರೊಕ್ಕಾನ ಬೇಕಾದರ ಎರಡ ದುಡ್ಡ ಹೆಚ್ಚ ಕೊಡತೇನಂತ.... ಈ ರೊಕ್ಕ ತಗೋ." ಎಂದು ಮುಟ್ಟಿಗೆಯೊಳಗಿನ ರೊಕ್ಕವನ್ನು ಬಸಪ್ಪನ ಕೈಯಲ್ಲಿ ಮೇಲಿಂದ ಒಗೆದರು. ಬಸಪ್ಪನು ರೊಕ್ಕ ತಕ್ಕೊಂಡು ನೋಡಿ,—

"ಧಣೇರ...ಮೂರ್ಹೇ ಆಣೆ ಅವ ಅಲ್ರಿ?"

ಅಂಜುತ್ತ ಅಂಜುತ್ತ ಹೀಗೆ ಕೇಳಿದ.

"ಹೌದೋ ನನಗೂ ಗೊತ್ತದ, ಮೂರ ಆಣೆ ಅವ ಅನ್ನೊದು....

ಚಿಲ್ಲರೆ ಇಲ್ಲ ಈಗ. ಸಂಜಿಗೆ ಹೊರಿ ಒಗಿಯಲಿಕ್ಕೆ ಬರ್ತಿ ಅಲ್ಲ ? ಆಗs ಇದೂ ಒಂದಾಣೆ ಕೊಡತೇನಂತ. "

ಬಸಪ್ಪನನ್ನು ಮುಂದಿನ ಕೆಲಸದ ಬಲೆಯಲ್ಲಿ ಹಿಡಿಯುವ ಉದ್ದೇಶದಿಂದ ಈ ಚಿಲ್ಲರೆಯ ಪುರಾಣವನ್ನು ಮುಂದಿಟ್ಟರು, ರಾಯರು.

ಇಲ್ರಿ ! ನಿನ್ನಿಂದೂ ಹೊಟ್ಟೆಗೆ ಇಲ್ಲ. ಅದೂ ಒಂದಾಣೆ ಕೊಟ್ರೆ ಸೇರ ಸೆಜ್ಜಿನಾರ ಕೊಂಡಕೊಂಡ ಹೋಗತೇನ್ರಿ. "

ಎಂದು ಬಸಪ್ಪ ಅಂಗಲಾಚಬೇಕಾಯಿತು. " ಅದೇ ಮೂರ ಆಣೆ ಸಿಕ್ಕದ್ದ ನಿನ್ನ ಪುಣ್ಯ ಹೋಗ— ಈಗ ಚಿಲ್ಲರದ ತಾಪತ್ರಯ ಎಷ್ಟು ಅದ ಗೊತ್ತಿಲ್ಲ ನಿನಗ ? " ಎಂದು ಕೇಳುತ್ತ ಒಳಗೆ ಹೋಗಿಬಿಟ್ಟರು, ರಾಯರು. ಬಸಪ್ಪನು ಸ್ವಲ್ಪ ಹೊತ್ತು ಅಲ್ಲೇ ನಿಂತು ರಾಯರು ರೊಕ್ಕ ತಕ್ಕೊಂಡು ಬರುವರೇನೋ ಎಂದು ದಾರಿಕಾಯ್ದನು. ಬಹಳ ಹೊತ್ತಾದರೂ ರಾಯರು ಬರದಿರಲು ಅಂಜುತ್ತಂಜುತ್ತ ಬಾಗಿಲಲ್ಲಿ ಇಣಿಕಿನೋಡಿ,—

" ಧಣೇರs "

ಎಂದು ಕರೆದ ಕರುಣ ಸ್ವರದಿಂದ.

" ಒಗೆ ನಮ್ಮ ರೊಕ್ಕ, ತಗೊಂಡ ಹೋಗ ನಿನ್ನ ಹೊರಿ ! ಈಗೇನ ಉರುವಲ ಬೇಕಾದಷ್ಟು ಸಿಗತಾವ " ಎಂದು ವರ್ತಮಾನ ಪತ್ರದಲ್ಲಿ ದೃಷ್ಟಿ ಇಟ್ಟೇ ರಾಯರು ಗುಡುಗಿದರು.

ಬಸಪ್ಪನ ಕೈಯಲ್ಲಿ ಏಳಾಣೆ. ಒಂದೆರಡು ವಾರಗಳಲ್ಲಿ ಅವನ ಹತ್ತರ ಇಷ್ಟು ಹಣವೆಂದೂ ಆಗಿರಲಿಲ್ಲ. ಇಂದೇನೋ ಸುದೈವ. ಹೊಟ್ಟೆತುಂಬ— ಅಲ್ಲ— ಹೊಟ್ಟೆಗೆ ಹತ್ತುವಷ್ಟು ತಿನ್ನಲು ಸಿಕ್ಕುವದೆಂದು ಸ್ವಲ್ಪ ಅರಳಿದ ಮುಖದಿಂದಲೇ ಅಂಗಡಿಯಲ್ಲಿ.

" ಅಚ್ಚೇರ ಹಿಂಡಿ ಕೊಡ್ರಿ ! "

ಎಂದು ಕೇಳಿದ. ಅಂಗಡಿಕಾರ ಯಾರೊಡನೆಯೋ ಹರಟುವದರಲಿ ಮೈ ಮರೆತಿದ್ದ. ಬಸಪ್ಪ ಬೇಡಿದುದು ಕೇಳಿಸಲಿಲ್ಲವೇನೋ! ಹಾಗೇ ಮಾತು ಮುಂದೊರಿಸಿದ. ಹತ್ತು ನಿಮಿಷಗಳಷ್ಟು ಕಳೆದಿರಬೇಕು. ಬಸಪ್ಪ ಎರಡನೆಯ ಅಂಗಡಿಗೆ ಹೋಗಬೇಕೆಂದು ಒಮ್ಮೆ ವಿಚಾರಿಸಿದ. ಆದರೆ ಆ ಹಳ್ಳಿಯಲ್ಲಿ

ಆ ಅಂಗಡಿಯನ್ನು ಳಿದರೆ ಬೇರೆ ಕಡೆಗೆ ನೆಲಗಡಲೆಯ ಹಿಂಡಿ ಸಿಕ್ಕುವಂತಿರಲಿಲ್ಲ. ಬರೀ ಸೆಜ್ಜೆಯನ್ನೊಯ್ದರೆ ಹೊಟ್ಟೆಗೆ ಸಾಲುವಂತಿಲ್ಲ. ಏನು ಮಾಡಬೇಕೆಂಬ ಚಿಂತೆಯಲ್ಲಿ ಸ್ವಲ್ಪ ಕಾಲ ಕಳೆಯುವದರಲ್ಲಿ ಯಾರೋ ಒಬ್ಬರು ಅಂಗಡಿಗೆ ಬಂದರು.

" ಉತ್ತತ್ತಿ ಹ್ಯಾಗ ಕೊಡುತೀರಿ ? "

ಬಂದವರು ಕೇಳಿದರು. ಅಂಗಡಿಕಾರನು ಕೂಡಲೆ ಬೆಚ್ಚಿ ಬಿದ್ದವನಂತೆ ಎದ್ದು,—

" ಈಗ್ಯಾಕರೀ ಉತ್ತತ್ತಿ ಗೌಡರ ? ಒಂದೂಕಾಲು ರೂಪಾಯಿಗೆ ಸೇರು. " ಎಂದು ಹೇಳಿದ.

" ಎರಡು ಸೇರ ಕೊಳ್ತೇನಿ, ಒಂದು ರೂಪಾಯಿ ಎರಡಾಣೆ ಮಾಡಿ ಕೊಟ್ಟುಬಿಡೊ ? "

ಅಂಗಡಿಕಾರನು ಆರಿಸಿ ತೂಕ ಹಾಕುತ್ತ,—

" ಯಾಕರೀ ಬಹಳ ಒಯ್ಯುತ್ತೀರಿ ? " ಎಂದು ಕೇಳಿದ.

" ಏನೋ ನಿನ್ನೆ ತಿರಗಾಡ್ತ ಸ್ಟೇಶನ್ನಿಗೆ ಹೋಗಿದ್ದೆ. ಸಹಜ ತೂಕ ಮಾಡಿಸಿಕೊಂಡೆ. ಮೊದಲಿನಕ್ಕಿಂತ ಎರಡು ಪೌಂಡು ಕಡಿಮೆಯಾಯ್ತು ! ಒಂದು ತಿಂಗಳಲ್ಲಿ ಮೊದಲಿನಷ್ಟು ತೂಕ ಏರಿಸೋದು ಎಂದು ನಿಶ್ಚಯಿಸಿದ್ದೇನೆ. "

ಎಂದು ಮಾತು ಮುಗಿಸಿ, ಬಿಂಕದಲ್ಲಿಯೇ ಉತ್ತತ್ತಿ ತಕ್ಕೊಂಡು ಹೋದರು. ಅಂಗಡಿಕಾರನು ಏನೂ ಕೇಳದೆ ಕೀರ್ದಿಯಲ್ಲಿ ಲೆಕ್ಕ ಬರೆದಿಟ್ಟುಕೊಂಡ. ಇದೇ ಸಂಧಿಯೆಂದು ಅರಿತು,—

" ಅಚ್ಚೇರ ಹಿಂಡಿ ಕೊಡ್ರಿ ! "

ಎಂದು ಬಸಪ್ಪ ದೈನ್ಯದಿಂದ ಮತ್ತೊಮ್ಮೆ ಕೇಳಿದ.

" ಹೊಂ! "

ಎಂದು ಅಂಗಡಿಕಾರನು ಆಲಸ್ಯದಿಂದ ಎದ್ದು ಹಿಂಡಿಯನ್ನು ತೂಗಿ ತಂದು,—

" ತಗೋ ! " ಎಂದ.

ಬಸಪ್ಪ ಉಟ್ಟದೋತರ ಉಡಿಯಲ್ಲಿ ತಕ್ಕೊಂಡು ಚವಲಿಯೊಂದನ್ನು ಕೊಟ್ಟ.

"ನಿನಗೆ ಕೊಡಲಿಕ್ಕೆ ಎರಡು ದುಡ್ಡು ಇಲ್ಲಲೊ? ಮತ್ತೇನಾದರ ತಗೊ!"

ಪೆಟ್ಟಿಗೆಯಲ್ಲಿ ನೋಡದೆ ಅಂಗಡಿಕಾರ ಹೇಳಿದ. "ಸಜ್ಜಿ ಬೇಕರಿs"

"ಸಜ್ಜಿ ನಮ್ಮಲ್ಲಿಲ್ಲ. ಬಿಳೀ ಗೋದಿ ಅವ, ತಗೋ ಬೇಕಾದರ, ಸಜ್ಜಿ ಧಾರಣಿ ಗೋದಿ ಧಾರಣಿ ಒಂದೇ ಅದ. ಚಪಾತಿ ಮಾಡಿಸಿ ಹೊಡಿಯಲ್ಲ!"

"ಒಲ್ಲಿರಿ! ಹಿಂಡೀ ಹಾಕಿ ಬೀಸಲಿಕ್ಕೆ ಬರೂದಿಲ್ಲ. ಈ ಆಣೆ ತಗೊಳ್ಳಿರಿ. ಆ ಅಂಗಡೀಲಿ ಸಜ್ಜಿ ತಗೊಂಡ ಬರತಾ ಎರಡ ದುಡ್ಡ ಕೊಟ್ಟ ಹೋಗ್ತೇನಿ." ಎಂದು ಒಂದಾಣೆ ಕೊಟ್ಟ.

"ಇಲ್ಲದ ಒಂದ ಮಾಡಲಿಕ್ಕ ಹಚ್ಚತಿ, ಬಿಸಿಲ ಹೊತ್ತಿನಾಗ, ಸುರವ ಅಲ್ಲೇ ಕಟ್ಟೀ ವ್ಯಾಲ, ಬರುವಾಗ ಎರಡ ದುಡ್ಡ ಕೊಟ್ಟ ಒಯ್ಯಂತ."

ಕೆರಳಿ ಕೈಯಲ್ಲಿಯ ಚವಲಿಯನ್ನು ಒಗೆದ ಅಂಗಡಿಕಾರ. ಬಸಪ್ಪ ಸಜ್ಜಿ ಕೊಳ್ಳಲೆಂದು ಮತ್ತೊಂದು ಅಂಗಡಿಗೆ ಹೋದ. ಅಲ್ಲಿಯೂ ಚಿಲ್ಲರೆ ಇಲ್ಲ ಇಲ್ಲವೆಂದು ಹೇಳಿದ್ದರಿಂದ ಉಪಾಯಗಾಣದೆ, ಆರಾಣೆಯ ಎಲ್ಲ ಸಜ್ಜಿಯನ್ನು ಕೊಂಡು ಹಿಂತಿರುಗಿ ಮೊದಲಿನ ಅಂಗಡಿಗೆ ಬಂದು,—

"ಅಲ್ಲೂ ಇಲ್ರಿ! ಎರಡು ದುಡ್ಡಿನ ಹಿಂಡೀನ ತಕ್ಕೊಳ್ರಿ!"

ಎಂದ ನಮ್ರ ಸ್ವರದಿಂದ.

"ಹೂಂ! ಅದಕ್ಕs ಅನಲಿಲ್ಲೇನ ಉಪದ್ರವ ಕೊಡುತೀ ಅಂತ."

ಎಂದು ಅರ್ಧಕ್ಕಿಂತ ಹೆಚ್ಚಿಗೇನೇ ಹಿಂಡಿಯನ್ನು ತಕ್ಕೊಂಡು ಒಳಗೆ ಹೋದ ಅಂಗಡಿಕಾರ.

"ಹೀಗ್ಯಾಕ್ರಿ, ಅಷ್ಟ್ಯಾಕ ತಗಿತೇರಿ?"

ಎಂಬ ಹಸಿದ ಹೊಟ್ಟೆಯವನ ಮುರುಕ ಕೇಳಲಿಲ್ಲವೇನೋ ಅವನಿಗೆ!

ಹೊತ್ತು ಹೊರಳಿತು. ಮನೆಯಲ್ಲಿ ಮಕ್ಕಳು ಹಸಿದು ಕಳವಳಿಸುತ್ತಿರಬೇಕು. ಇದನ್ನು ಬೀಸಿ ಹೊಟ್ಟೆಗೆ ಕೂಳುಗಾಣಬೇಕಾದರೆ ಇನ್ನೂ ಒಂದು ತಾಸು ಬೇಕು. ಎಂದು ಲಗುಬಗೆಯಿಂದ ಹಿಂಡಿಯನ್ನು ಉಡಿಯಲ್ಲಿ ಹಾಕಿಕೊಂಡು, ಬಸಪ್ಪ ಮನೆಯ ಹಾದೀ ಹಿಡಿದ. ಮನೆಯ ಸಮೀಪಕ್ಕೆ ಬರುವಷ್ಟರಲ್ಲಿ,—

"ಕಳ್ಳ ಸೂ...ಮಗ ಎಲ್ಲಿ ಹೋದಾ ? ಇಷ್ಟು ಲಗೂನೆ ಮಾರಲಿಕ್ಕೆ ಕಳಿಸಿ ಬಿಟ್ಟಿದಿ ? ಯಾರ ಕಿತ್ತಿ ತಾ ಅಂದಿದ್ರೂ ನಮ್ಮ ಹೊಲದಿಂದ........ ಹುಚ್ಚ ಭೋಸ....ಈಗೇನ ಮೊದಲಿನಂಗ ಅಗ್ಗ ಧಾರಣಿ ಅದ? "

ಎಂದು ಯಾವನೋ ಒಬ್ಬ ರೈತನು ಗುಡಿಸಲಿನ ಮುಂದೆ ನಿಂತು, ಬೈಗಳ ಮಳೆಗರೆಯುವದನ್ನು ಕೇಳಿ ಬಸಪ್ಪನ ಕೈ ಕಾಲೇ ತಣ್ಣಗಾದುವು. ಏಳಲಾರದ ಕಾಲುಗಳನ್ನು ಕಿತ್ತಿಟ್ಟು ಮೆಲ್ಲನೆ ಗುಡಿಸಲಿನ ಕಡೆಗೆ ಬಂದ. ಬಸಪ್ಪನನ್ನು ಕಂಡೊಡನೆಯೇ ರೈತನ ಕೋಪಾಗ್ನಿಗೆ ಸವುದೆ ಸಿಕ್ಕಂತಾಯ್ತು.

"ಎಷ್ಟಕ ಮಾರ್ದಿ ಮಗನ ಹೊರಿ ? "

ಎಂದು ಗದ್ದರಿಸುತ್ತ ಮೈಮೇಲೆ ಏರಿಹೋಗಿ ಧೋತರ ಹಿಡಿದು ಎಳೆದ. ಬಸಪ್ಪನು ಉಟ್ಟುಕೊಂಡ ಧೋತರವು ತೀರ ಹಳೆಯದೂ ಕೊಳಕೂ ಆದುದರಿಂದ ಕೂಡಲೆ ಹರಿದು ಕಾಳುಗಳೆಲ್ಲ ನೆಲಕ್ಕೆ ಬಿದ್ದುವು. ಬೈಗುಳಿನಿಂದಲೇ ಬೆಂದು ಬೆಂಡಾದ ಬಸಪ್ಪನ ಮುಖವು ಧೋತರ ಹರಿಯಿತೆಂಬ ಚಿಂತೆಯಿಂದ ಸುಟ್ಟ ಸುಣ್ಣದ ಹರಳಿನಂತಾಯಿತು. ಬಸಪ್ಪನ ನಡುವಿಗೆ ರೊಕ್ಕವಿರಬೇಕು, ಅವನ್ನು ತಕ್ಕೊಳ್ಳಬೇಕೆಂಬ ರೈತನ ಬಯಕೆಯು ಸಫಲವಾಗದ್ದರಿಂದ ಅವನ ಕಣ್ಣುಗಳು ಕೆಂಪಗೆ ಕೆಂಡದಂತಾದುವು. ಗಿಡದ ಮರೆಯಲ್ಲಿ ಅಡಗಿನಿಂತ ಚಿಕ್ಕ ಹುಡುಗರು-ಬಸಪ್ಪನ ಮಕ್ಕಳು-ಹಸಿವೆಗಾಗಿ ಹೆದರಿಕೆಯನ್ನು ಬಿಟ್ಟು ಓಡಿಬಂದು ನೆಲದಮೇಲೆ ಬಿದ್ದ ಹಿಂಡಿಯ ಚೂರುಗಳನ್ನು ಆರಿಸಿ ತಿನ್ನಹತ್ತಿದವು. ಸಜ್ಜೆಯೆಲ್ಲ ಮಣ್ಣುಪಾಲಾದವೆಂದು ಕಲ್ಲವ್ವನು ಗುಡಿಸಲಿನೊಳಗಿಂದ ಹರಕು ಮರವೊಂದನ್ನು ತಂದು ಬಳಿದು ತುಂಬುತ್ತಿದ್ದಳು. ಆಗ ತಮ್ಮ ಅಸಹಾಯ ಸ್ಥಿತಿಯನ್ನು ನೆನೆದು ಅವಳ ಕಣ್ಣು ಕುಣಿಕೆಯಲ್ಲಿಂದ ಎರಡು ದೊಡ್ಡ ಹನಿಗಳು ಗಲ್ಲದ ಮೇಲೆ ಉರುಳಿದವು. ಅದೇ ಮುಳುಗುತ್ತಿರುವ ಸೂರ್ಯನ ಮಂದ ಪ್ರಕಾಶದಲ್ಲಿ ಬಸಪ್ಪನಿಗೆ ಆ ಕಣ್ಣೀರು ರಕ್ತದ ಹನಿಗಳಂತೆ ಕಂಡವು.



# ಮಿರ್ಜಿ ಅಣ್ಣಾರಾಯರ ಕೃತಿಗಳನ್ನು ಕುರಿತು

## ನಿಸರ್ಗ ( ಸಾಮಾಜಿಕ ಕಾದಂಬರಿ ) ಕ್ರಯ ೩-೮-೦

ಮಿರ್ಜಿ ಅಣ್ಣಾರಾಯರು ತಮ್ಮ ಸುಪ್ತ ಪ್ರತಿಭಾ ಶಕ್ತಿಯನ್ನು ಈಗ ಹೊರಗೆಡವಿದ್ದಾರೆ. 'ಸಾಹಿತ್ಯ ಜನ ಜೀವನದ ಕನ್ನಡಿ' ಎಂಬ ವಾದಕ್ಕೆ ಪ್ರತ್ಯಕ್ಷ ಪ್ರಮಾಣವಾಗಿದೆ. 'ನಿಸರ್ಗ' ಒಂದು ಮಧ್ಯಮ ವರ್ಗದ ಜೈನ ಸಂಸಾರದ ಚಿತ್ರ ತಾನೇ ತಾನಾಗಿ ಇಲ್ಲಿ ರೂಪುಗೊಂಡಿದೆ.

—ವಾಹಿನಿ

ಕನ್ನಡ ಕಾದಂಬರೀ ಪ್ರಪಂಚದಲ್ಲಿ ನಿಸರ್ಗವೊಂದು ಉತ್ತಮ ಕಾದಂಬರಿಯಾಗಿ ನಿಲ್ಲುವುದು.

—ಜಯಂತಿ

'ನಿಸರ್ಗ'ದಂತಹ ಕಥಾವಸ್ತುವನ್ನು ಅಳವಡಿಸಿಕೊಂಡು ಯಾರಾದರೂ ಕಾದಂಬರಿ ಇಂದಿಲ್ಲ ನಾಳೆ ಬರದಾರು. ಆದರೆ ಆ ದೇಸಿ ಭಾಷೆಯನ್ನು ತಂದು ಕಾದಂಬರಿಯ ಶೈಲಿ ಸಂವಾದಗಳಲ್ಲಿ ಎರಕ ಹೊಯ್ಯುವ ಶಕ್ತಿ ಅಣ್ಣಾರಾಯರಂತಹ ಜೀವನ ವಿಮರ್ಶಕರಿಗೇನೇ ಸಾಧ್ಯ.

— ಜಯಕರ್ನಾಟಕ

ಸುಂದರ ಕೃತಿಯನ್ನು ಸಮುಘಾತುವಾಗಿ ಚಿತ್ರಿಸುವ ಶಕ್ತಿ ಶ್ರೀ. ಅಣ್ಣಾರಾಯರಿಗೆ ಮೈಗೂಡಿದೆ ಎಂಬುದು ಎದುರಿಗೇ ಕಾಣುತ್ತದೆ. ಅನುಭವದ ಮೆರುಗು ಗೂಡಿ ಸುಂದರ ಸುಂದರ ತರವಾಗಿ ಬರುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಇದೊಂದು ಉತ್ತಮ ಕೃತಿ.

—ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

Nisarga has been hailed as one of the best novels produced recently in Karnatak.——We have in Shri Mirji Annarao's novel realism blended

with art, a faithful but attractive representation of life.

—*The Indian P. E. N.*

## ರಾಷ್ಟ್ರ ಪುರುಷ (ರಾಜಕೀಯ ಕಾದಂಬರಿ) ಕ್ರಯ ೭-೦-೦

'ರಾಷ್ಟ್ರ ಪುರುಷ' ಕನ್ನಡದ ಒಳ್ಳೇ ಕಾದಂಬರಿಗಳ ಮಾಲಿಕೆಯಲ್ಲಿ ಸೇರಲು ಅರ್ಹವಾದುದು ಎಂದು ನಿಸ್ಸಂಕೋಚವಾಗಿ ಹೇಳಬಹುದು. ಪಾತ್ರರಚನೆಯಲ್ಲಿ ಲೇಖಕರ ಅಪ್ರತಿಮ ಕೌಶಲ್ಯವನ್ನು, ಮಾನವನ ಅಂತರಂಗದ ಅರಿವನ್ನೂ ತೋರ್ಪಡಿಸಿದ್ದಾರೆ.

—ವಾಹಿನಿ

ಕಳೆದ ಕಾಲು ಶತಮಾನದಲ್ಲಿ ನಾಡು ಹೂಡಿದ ಹೋರಾಟ, ಸುರಿಸಿದ ನೆತ್ತರು, ಉಂಡ ದುರ್ಭೋಜನ ಗಳಿಸಿದ ವಿಜಯಗಳ ಸಹಜ ಕಾದಂಬರಿ— "ರಾಷ್ಟ್ರ ಪುರುಷ". ಆದಕ್ಕಾಗಿಯೇ ಕನ್ನಡದಲ್ಲಿ ಇದಕ್ಕೆ ವಿಶಿಷ್ಟ ಸ್ಥಾನ.

—ದೇಶಬಂಧು

ಇಲ್ಲಿ ಬರುವ ವಿಷಯ ವಿಸ್ತಾರವನ್ನು ನೋಡಿದರೆ ಲೇಖಕರು 'ಏನನ್ನು ಬಿಟ್ಟಿದ್ದಾರೆ' ಎನ್ನಿಸುವುದು. ಅವರು ಇದನ್ನು ಬರೆಯುವಲ್ಲಿ ಅದೆಷ್ಟು ತಾಳ್ಮೆವಹಿಸಿದ್ದಾರೆನ್ನುವುದೇ ಅವರ ಮಹಾ ಸಾಹಸ. ಅವರ ಈ ಗುಣದಿಂದ ನಾವಿನ್ನೂ ಅವರಿಂದ ಅನೇಕ ಕೃತಿಗಳನ್ನು ಕಾಣುವ ಯೋಗ ಇದೆ.

—ಪುಸ್ತಕ ಪ್ರಪಂಚ

Much of this field—in background and process—has already been treated, well or ill, by other writers. But the stress and drive of personality behind things here is Mr. Mirji's own. Life in the villages and in Bombay is truly rendered...

The novel, on the whole is a vivid document of its time and kind and is one of the really good pieces of writing we now possess.

—*The Indian P. E. N.*

## ರಾಮಣ್ಣ ಮಾಸ್ತರು ( ಸಾಮಾಜಿಕ ಕಾದಂಬರಿ )

ಕ್ರಯ ೨-೦-೦

ಈ ಕಾದಂಬರಿಯಲ್ಲಿ ಹಳ್ಳಿಯ ಜೀವನದ ಒಂದು ಪ್ರಾತಿನಿಧಿಕ ಚಿತ್ರ ಕಂಡು ಬರುತ್ತದೆ. ಇಲ್ಲಿಯ ಪಾತ್ರಗಳ ವಾಸ್ತವತೆಯನ್ನು ಹಳ್ಳಿಯಿಂದಲೇ ಬಂದ ನಾನಂತೂ ಮನಸಾರೆ ಮೆಚ್ಚಿಕೊಂಡಿದ್ದೇನೆ.... 'ರಾಮಣ್ಣ ಮಾಸ್ತರು' ಕಾದಂಬರಿ ಹಳ್ಳಿಯ ಸಾಲೆಯ ಮಾಸ್ತರರ ಒಂದು ಚಿಕ್ಕ ಮಹಾಕಾವ್ಯ. ( ಮುನ್ನುಡಿಯಿಂದ )

ಪ್ರೊ. ಎಸ್. ಎಸ್. ಮಾಳವಾಡ

ಇದು ನೇರವಾಗಿ ಮನ ಮುಟ್ಟುವಂತೆ ಹೇಳುವ ಸರಳ ತಂತ್ರ. ಪರಿಣಾಮ. ಭೀಕರವಾದೊಂದು ಘರ್ಷಣೆಯನ್ನು ಪ್ರತಿಬಿಂಬಿಸುವ ಚಿತ್ರ. ವಿಷಮ ಆರ್ಥಿಕ ಪದ್ಧತಿಯನ್ನು—ಸಮಾಜ ಪದ್ಧತಿಯನ್ನು—ಕೊನೆಗಾಣಿಸಲು ನಡೆದಿರುವ ಮಹಾಯತ್ನದ ಒಂದು ತುಂತುರು ಹನಿ. ಇದು ಗದ್ಯ ಕಾವ್ಯ. ಜೀವನ ಹೋರಾಟದ ಸಂಗೀತ.

— ದೇಶಬಂಧು

ಶ್ರೀ. ಮಿರ್ಜಿ ಅಣ್ಣಾರಾಯರು ಈ ಕಾದಂಬರಿಯಲ್ಲಿ ಹಳ್ಳಿಗಾಡಿನ ಒಂದು ಸಂಸಾರದ ಚಿತ್ರವನ್ನು ಬಹು ಜಾಣ್ಮೆಯಿಂದ ಚಿತ್ರಿಸಿದ್ದಾರೆ.

— ಸುಬೋಧ

## ಪ್ರತಿ ಸರಕಾರ ( ರಾಜಕೀಯ ಕಾದಂಬರಿ ) ಕ್ರಯ: ೧-೧೨-೦

ಶ್ರೀ. ಮಿರ್ಜಿ ಅಣ್ಣಾರಾಯರ ಲೇಖನಿ ಈ ಬಗೆಯ ಸ್ವತಂತ್ರ ಕಾದಂಬರಿ ಲೇಖನಕ್ಕೆ ಚೆನ್ನಾಗಿ ಅನುಭವಗೊಂಡು ಪಳಗಿದೆ. ಕಾದಂಬರಿಯಲ್ಲಿ ಅಲ್ಲಲ್ಲೆ ಕಂಡು 'ಬರುವ ಸಂದರ್ಭ ಸನ್ನಿವೇಶಗಳು ಸ್ವಾರಸ್ಯಪೂರ್ಣವಾಗಿ ವಾಚಕರ ಚಿತ್ತವನ್ನು ಸೆಳೆಯುತಕ್ಕವಾಗಿವೆ.

— ಸುಬೋಧ.

ಇಲ್ಲಿರುವ ಮನೋವಿಜ್ಞಾನವೂ ಕನ್ನಡಿಗರಿಗೆ ಹೊಸದು.

— ವಿಶಾಲ ಕರ್ನಾಟಕ.

ಈ ಹೋರಾಟವನ್ನು ಒಂದು ವಿಶಿಷ್ಟ ಕಥನ ತಂತ್ರದಿಂದ ಹೆಣೆದು ಶ್ರೀ. ಮಿರ್ಜಿ ಅಣ್ಣಾರಾಯರು ಈ ಕಾದಂಬರಿಯನ್ನು ರಚಿಸಿದ್ದಾರೆ.

—ಚುಳಕಿ ಗೋವಿಂದರಾಯರು.

Another form of technique that has become very Common in modern Kannada novels is what is called the " **Flash Back** " technique. That consists in making the character indulge in thoughts of days of yore, and there by enable the readers to know what has taken place prior to the sequence under attention. This is indeed a very debt way of narration and requires great skill on the part of the writers. The two writers in Kannada who have to an exetent succeeded in this art are Prof. Inamadar and Mirji Anna Rao. The latter has especeially been an adept in it and the superb skill with which he uses this technique is worthy of admiration. His " Prati Sarakar " is a case in point,

— *The Bharat Jyoti.*

## ಅಶೋಕ ಚಕ್ರ ( ಸಾಮಾಜಿಕ ಕಾದಂಬರಿ )

೩–೮–೦

ಅಣ್ಣಾರಾಯರಿಗೆ ತಾವು ಚಿತ್ರಿಸುತ್ತಿರುವ ಸಮಾಜದ ಮತ್ತು ಜೀವನದ ಸಂಪೂರ್ಣ ಅನುಭವವಿದೆ; ಅದನ್ನು ಸಾಕಷ್ಟು ಮನನೀಯವಾಗುವಂತೆ

ಚಿತ್ರಿಸುವ ಲೇಖಕನ ಸಾಮರ್ಥ್ಯವೂ ಇದೆ. ಇದೇ ಈ ಕಾದಂಬರಿಯ ಗುಣ.

— ಕರ್ಮವೀರ.

ಹಳ್ಳಿ ಹಳ್ಳಿಯಲ್ಲಿಯೂ ಬಡ ಒಕ್ಕಲಿಗರ ಅಜ್ಞಾನದ ಲಾಭವನ್ನು ಹೊಂದಿ ಕೊಬ್ಬಿರುವ ಘಟಸರ್ಪದ ವಿಷ ವರ್ತುಲದ ಚಿತ್ರಣ 'ಅಶೋಕ-ಚಕ್ರ'. ಆ ಚಿತ್ರದಲ್ಲಿ ವಾಸ್ತವತೆಯಿದೆ, ಭೀಕರತೆಯಿದೆ, ಹಿಂದಿನ ಅಸಮಾನ ಆರ್ಥಿಕ ವ್ಯವಸ್ಥೆಯ ಸಹಜ ಪ್ರತಿಕ್ರಿಯೆಗಳ ನಿರೂಪಣೆಯಿದೆ. ಕಾದಂಬರಿಕಾರರ ಲೆಕ್ಕಣಿಕೆಯ ಹಿಂದೆ, ಸಂವೇದನೆಯ, ಅನುಕಂಪದ, ಅನುಭವದ, ಸೂಕ್ಷ್ಮದ್ರಷ್ಟಿಯ ಹಿನ್ನೆಲೆಯಿದೆ. ಇವೆಲ್ಲ ಕಾರಣಗಳಿಂದಾಗಿ ಮೊದಲನೆಯ ವರ್ಗದ ಕಾದಂಬರಿಗಳ ಮಟ್ಟಕ್ಕೇರುವ ಕನ್ನಡ ಕಾದಂಬರಿ-ಅಣ್ಣಾರಾಯರ 'ಅಶೋಕ ಚಕ್ರ.'

— ನುಡಿ

ಇದೊಂದು ಉತ್ತಮ ಕಾದಂಬರಿ..... ನಾಡಿನ ಜೀವಂತ ಸಮಸ್ಯೆಯನ್ನು ಚಿತ್ರಿಸಿದ ಅಣ್ಣಾರಾಯರು ಇದಕ್ಕಿಂತಲೂ ಉತ್ತಮ ತರದ ಕಾದಂಬರಿ-ಸಾಹಿತ್ಯ ಸೃಷ್ಟಿಸಬಲ್ಲರು ಎಂದು ಕನ್ನಡಿಗರಿಗೆ ಆಶೆ ತೋರಿಸಿದ್ದಾರೆ.

— ಅರುಣ.

**ಭಸ್ಮಾಸುರ** ( **ಸಾಮಾಜಿಕ ಕಾದಂಬರಿ** ) ಕ್ರಯ: ೧-೮-೦

As instances, we should take Mirji's "Bhasmasur" ...... the Book is a conflict of ideals, ideas, and the Compunctions; and the writer, with admirable dexterity analyses the characters thread, bare and makes the reader muse in silent Cantemplation long after he has finished reading the novel.

—*The Bharat Jyoti.*

The work is didactic, drawing attention to current abuses, and mirroring the groupings after better things by the thinking part of society.

—*The Indian P. E. N.*

## ಪ್ರಣಯ-ಸಮಾಧಿ ( ಕಥಾಸಂಗ್ರಹ ) ಕ್ರಯ ೧-೪-೦

ಇಲ್ಲಿ ಬಂದಿರುವ ಆರು ಕಥೆಗಳಿಂದ ಇತ್ತೀಚಿನ ಭಾರತದ ಜನ ಜೀವನದ ಆರು ಮೈಗಳನ್ನು ಗುರುತಿಸಲು ಯತ್ನಿಸಿದೆ. ಇವುಗಳಲ್ಲಿ ಮೂಡಿ ನಿಂತ ಜೀವನ ಮುಖ್ಯ.

—ಮೊದಲು ಮಾತಿನಿಂದ

ಹತ್ತೊಂಭತ್ತನೂರಾ ನಲವತ್ತೆರಡರ ಕ್ರಾಂತಿಯಲ್ಲಿ ಸಿಕ್ಕ ಸರಕಾರೀ ನೌಕರ ನೊಬ್ಬನ ಮಾನಸಿಕ ತೂಗುಯ್ಯಾಲೆಯನ್ನು ಚೆನ್ನಾಗಿ ಚಿತ್ರಿಸಿದ್ದಾರೆ ಲೇಖಕರು.

—ಜಯಂತಿ

## ವಿಜಯಶ್ರೀ ( ಕಥಾಸಂಗ್ರಹ ) ಕ್ರಯ ೧-೦-೦

ದೇಸಿಯನ್ನು ಔಚಿತ್ಯವನ್ನರಿತು ಉಪಯೋಗಿಸುವಲ್ಲಿ ಅದರ ಸಂಪತ್ತಿಯನ್ನು ಸೂರೆಮಾಡುವಲ್ಲಿ ಅಣ್ಣಾರಾಯರು ಮೆಚ್ಚತಕ್ಕ ಗುಣವನ್ನು ತೋರಿದ್ದಾರೆ.

—ಪ್ರೊ. ರಂ. ಶ್ರೀ. ಮುಗಳಿ

ಕನ್ನಡದ ಸಣ್ಣಕತೆಗಳ ಬಳಗದಲ್ಲಿ ಈ ವಿಧದ ಕೃತಿಗಳು ಹಲವಿಲ್ಲ. ತನ್ನ ಮಾತುಗಳು ಹೆಚ್ಚು ಇರದೆ, ಸಂವಾದ ರೂಪದಲ್ಲಿ ಕತೆಯನ್ನು ಹರಿಯಿಸಿ, ಅಚ್ಚುಕಟ್ಟಾಗಿ ಕೊನೆಗೊಳಿಸುವ ಲೇಖಕರ ಜಾಣ್ಮೆ ಪ್ರಶಂಸನಿಯ........ ಕನ್ನಡ ಕಥಾ ಪ್ರಪಂಚಕ್ಕೆ ಇತ್ತಿರುವ ಅಮೂಲ್ಯ ಕೊಡುಗೆ ಇದು ಎನ್ನಬೇಕು.

—ಜಯಂತಿ

## ದತ್ತವಾಣಿ (ವಿಮರ್ಶೆ) ಕ್ರಯ ೧-೪-೦

ತುದಿಯಿಂದ ಕಡೆತನಕ ವಾಕ್‌ಶೈಲಿಯು ಅವ್ಯಾಹತವಾಗಿ ಹರಿ

ಯುತ್ತಿದ್ದು, ಒಂದು ಉದಾತ್ತವ್ಯಕ್ತಿತ್ವದ ಕಾದಂಬರಿಯಂತೆ ರಂಜಿಸುತ್ತದೆ. ಕೆಲವು ಕಡೆ ಮೂರ್ತಿಗಿಂತ ಅದನ್ನು ಅರಿತು ಧ್ಯಾನಿಸುವ ಆರಾಧಕನು ಹೆಚ್ಚೆಂಬ ಭಾವನೆಯನ್ನು ಹುಟ್ಟಿಸುತ್ತದೆ ........ ಕನ್ನಡಿಗನಾದ ಪ್ರತಿಯೊಬ್ಬನೂ ಇದನ್ನು ಓದಬೇಕು. ಇಂಗ್ಲಿಷ್ ತಜ್ಞರು ಇದನ್ನು ಆಂಗ್ಲ ಭಾಷೆಗೆ ಪರಿವರ್ತಿಸಬೇಕು.

—ಸ್ವದೇಶಾಭಿಮಾನಿ

ಅಂಬಿಕಾತನಯರ ಹಾಡುಗಳಲ್ಲಿ ಆಸ್ವಾದ ಮಾಡಬೇಕಾದ ಮುಖ್ಯಾಂಶಗಳನ್ನು ಎತ್ತಿತೋರಿಸಿ ಓದುಗರಿಗೆ ಮಾರ್ಗದರ್ಶನ ಮಾಡುವ ಕಾರ್ಯವನ್ನು ಈ ಪುಸ್ತಕದಲ್ಲಿ ಶ್ರೀ ಅಣ್ಣಾರಾಯರು ಜಯಪ್ರದವಾಗಿ ಸಾಗಿಸಿದ್ದಾರೆ.

—ಕರ್ಮವೀರ

Mr. Mirji Anna Rao has succeeded in showing us, a good deal at least of its secret and strength.

—*Hindu*

**ಲೇಖನ ಕಲೆ** **( ಸಾಹಿತ್ಯ ಶಾಸ್ತ್ರ )** ಕ್ರಯ ೨-೪-೦

ಕನ್ನಡದಲ್ಲಿ ಈ ಬಗೆಯ ಆಧಾರ ಗ್ರಂಥಗಳು ಅಪರೂಪವಾಗಿ ಕಣ್ಣಿಗೆ ಬಿದ್ದರೂ ಆಂಗ್ಲ ಭಾಷೆಯಲ್ಲಿ ಎ. ಟಿ. ಕ್ವಿಲರಕೂಚ್ ಎಂಬ ಪ್ರತಿಭಾವಂತ ಲೇಖಕನ 'The Art of Reading' 'The Art of writing' ಎಂಬ ಸರ್ವಮಾನ್ಯವಾದ ಗ್ರಂಥಗಳಂತಹವು ಇವೆ. ಅವುಗಳನ್ನೋದಿದವರಿಗೆ ತಂತ್ರ ಗ್ರಂಥ ಬರೆಯುವವರ ಯೋಗ್ಯತೆ ಎಂತಹದಿರಬೇಕೆಂಬುದು ಸ್ಪಷ್ಟವಾಗದಿರದು. ಮಿರ್ಜಿಯವರ ಈ ಗ್ರಂಥವಾದರೂ ಆ ಮಾದರಿಯ ಗ್ರಂಥಗಳ ಮಾಲಿಕೆಗೆ ಸೇರಬೇಕು. .... ಅನುಬಂಧ ಆಧಾರ ಸಾಹಿತ್ಯ ಗ್ರಂಥಗಳನ್ನು ನೋಡಲಾಗಿ 'ಲೇಖನ ಕಲೆ' ಬರೆಯುವಲ್ಲಿ ಗ್ರಂಥಕಾರರು ಎಷ್ಟು ತಾಳ್ಮೆ ವಹಿಸಿ, ಅಭ್ಯಾಸ ಬಲ ಮುಂದೆ ಮಾಡಿ ಕಾರ್ಯ ನಿರ್ವಹಿಸಿರುವರೆಂಬುದು ಎಲ್ಲರಿಗೂ ಹೊಳೆಯುವುದು. ಹೊಸ ಲೇಖಕರಿಗೆ ಅಭ್ಯಾಸ ದರ್ಪಣವೆಂಬ ದೃಷ್ಟಿಯಿಂದ ಈ ಹೊತ್ತಿಗೆ ಅತ್ಯುಪಯುಕ್ತ.

— ಜಯಂತಿ

ಹೊಸಗನ್ನಡ ಸಾಹಿತ್ಯವನ್ನು ಹೀಗೊಂದು ಕ್ರಮಬದ್ಧವಾಗಿ ಅಭ್ಯಸಿಸಿ ತರುಣರಿಗೆ ಮಾರ್ಗದರ್ಶಕವಾಗುವಂತೆ ಅದನ್ನು ನಿರೂಪಿಸಿದ ಕಾರ್ಯ ಸ್ತುತ್ಯವಾದುದು.

— ಜಯ ಕರ್ನಾಟಕ

ಲೇಖನ ಕಲೆ ಸಿದ್ಧಿಸಬೇಕಾದರೆ ಬರೀ ವ್ಯಾಸಂಗ ಪ್ರಯೋಜನವಿಲ್ಲ. ಆದರೆ ಸಾರ್ಥಕ ಸಾಹಿತ್ಯವನ್ನು ನಿರ್ಮಿಸಬಲ್ಲ ಅನುಭವ ವೈಶಾಲ್ಯವುಳ್ಳವರು, ಕಲಾಸಾಧಕರು ಲೇಖನ ಕಲೆಯ ತಂತ್ರವನ್ನೂ ಅರಿಯಬೇಕಾದದ್ದು ಆಗತ್ಯ. ಅಂಥವರಿಗೆ ಈ ಪುಸ್ತಕವು ಉಪಯುಕ್ತ. 'ನಿಸರ್ಗ'ದ ನಿರ್ಮಾಪಕರಾದ ಅಣ್ಣಾರಾಯರ ವಿಚಾರ ಧಾರೆ ಎಂತು ಹರಿದಿದೆ ಎಂಬುದನ್ನರಿಯಬೇಕೆನ್ನುವವರಿಗೂ ಇದೊಂದು ಅಮೂಲ್ಯ ಕಾಣಿಕೆ.

— ಛಾಯಾ.

ಈ ಕಾಲದಲ್ಲಿ ಇಂತಹ ಬೋಧಕ ಗ್ರಂಥಗಳು ಎಷ್ಟು ಹೊರಟರೂ ಕಡಿಮೇಯೇ ಆಗಿರುವದರಿಂದ ವಿಚಾರವನ್ನು ಕೆರಳಿಸುವ ಉಕ್ತ ಗ್ರಂಥವನ್ನು ಜಿಜ್ಞಾಸುಗಳು ಸ್ವಾಗತಿಸದಿರಲಾರರೆಂದು ನಮ್ಮ ನಂಬಿಗೆ.

— ಕರ್ಮವೀರ.

**ದಶಭಕ್ತಿ ( ಧರ್ಮಗ್ರಂಥ )** ಕ್ರಯ: ೩-೦-೦

ದಶಭಕ್ತಿ, ಪಂಚಸ್ತೋತ್ರ, ತತ್ವಾರ್ಥಸೂತ್ರ ಮೊದಲಾದ ವಿಷಯಗಳನ್ನೆಲ್ಲ ಕೊಟ್ಟು, ತಿಳಿಗನ್ನಡದಲ್ಲಿ ಅರ್ಥವನ್ನು ವಿವರಿಸಿದ್ದಾರೆ ಸಂಪಾದಕರು. ಪ್ರತಿಯೊಬ್ಬ ಶ್ರಾವಕನಿಗೂ ನಿತ್ಯೋಪಯೋಗಿಯಾದ ಗ್ರಂಥವಿದು. ಎಲ್ಲರ ಮನೆಗಳಲ್ಲಿಯೂ ಇರಬೇಕಾದ ಪುಸ್ತಕವಿದು.

**— ಟಿ. ಕೆ. ಪಾಟೀಲ**
ಬಿ. ಎ., ಬಿ. ಟಿ.

ಇದರಲ್ಲಿ ಬರುವ ಆಚಾರ್ಯರ ಪರಿಚಯವು ತುಂಬ ಮನನೀಯವಾಗಿದೆ. ಕೇವಲ ಕೃತಿಗಳನ್ನು ಪಾಠ ಮಾಡುವದಕ್ಕಿಂತ ಅವುಗಳನ್ನು ರಚಿಸಿದ ಮಹಾ ವ್ಯಕ್ತಿಗಳ ಜೀವನವನ್ನು ಅರಿತುಕೊಳ್ಳುವುದು ಮಹತ್ವದ್ದಾಗಿದೆ!

